# ಕೊಡಗು  ಸಂಗಾತಿ

ಅಕ್ಟೋಬರ್ 16 ರಿಂದ 31, 1999 ಪಾಕ್ಷಿಕ ಪತ್ರಿಕೆ (ನಿರ್ನಾಲ್ 29, – ಬೊಂತೆಲ್ 13ರ ತನಕ)

ನಂ. ೩೫, ಸವಿತಾ ನಿಲಯ, ೧ನೇ ಕ್ರಾಸ್, ೪ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು - ೫೭೦ ೦೧೨

ಸಂಪಾದಕಿ : ಪಟ್ಟಡ ಶೀಲಾಮಣಿ

ಕನ್ನಡ ಮತ್ತು ಅರೆಭಾಷೆಯ ಏಕೈಕ ಪಾಕ್ಷಿಕ ಪತ್ರಿಕೆ

K.R. N. N. 240 ಸಂಪುಟ : 3 ಸಂಚಿಕೆ : 20 ಪುಟಗಳು : 24 ಬೆಲೆ ರೂ. : 5-00




ಭಾಷೆ ಮತ್ತು ಜಾನಪದ ಬಗ್ಗೆ ಆಳವಾದ ಅಧ್ಯಯನ ಸಂಶೋಧನೆ ಮಾಡಿದ
ಜನಾಂಗದ ಮೇರು ವ್ಯಕ್ತಿ ಶ್ರೀ ಪುರುಷೋತ್ತಮ ಬಿಳಿಮಲೆ

[ಲೇಖನ ಒಳಪುಟಗಳಲ್ಲಿ]

## ಕೊಡಗಿನ ಜನತೆಗೆ ಮತ್ತು ಸಂಗಾತಿ ಓದುಗರಿಗೆಲ್ಲರಿಗೂ ದಸರಾ ಹಬ್ಬದ ಶುಭಾಶಯಗಳು

# ಕೊಡಗ್ ಗೌಡ ಸಾಂಸ್ಕೃತಿಕ ಅಕಾಡೆಮಿ (ರಿ.)

ಗುಡ್ಡೆಮನೆ ಅಪ್ಪಯ್ಯಗೌಡ ದಾರಿ, ಮಡಿಕೇರಿ.



ಆತ್ಮೀಯ ಜನಾಂಗ ಬಾಂಧವ್ ಕೆ,

ನಮ್ಮ ಜನಾಂಗದ ಸಾಂಪ್ರದಾಯಿಕ "ಕೈಲ್ ಮೂರ್ತ" ಹಬ್ಬನ ತಾರೀಖ್ 7-11-99ರ ಐತ್ವಾರದಂದ್ ಮಡಿಕೇರಿ ಗೌಡ ಸಮಾಜಲಿ ನಡ್ಸಿಕೆ ಏರ್ಪಾಡ್ ಮಾಡ್ಯೊಳೊ. ಅದ್‌ರ್‌ಂದ ಜನಾಂಗಭಿಮಾನಿಗಳಾದ ತಾವ್ ಸಂಸಾರದೊಟ್ಟಿಗೆ ಬಂದ್ ಕಾರ್ಯಕ್ರಮನ ಬಾರಿ ಲಾಯಕ್ಕಾಗಿ ನಡ್ಸಿ ಕೊಡುಕತ್ತ್‌ೞಿ ತುಂಬ್ ಮನ್ಸ್‌ಂದ ಕೇಳಿಕಂಡವೆ.

| | | |
|---|---|---|
| ತಾರೀಖ್ 6-11-1999 ಶನಿವಾರ | : | ಬೆಳ್ಗೆ 9-30 ಗಂಟೆಗೆ ಕ್ರೀಡಾ ಜ್ಯೋತಿ ಹೊರ್‌ಡುದು |
| | : | 10-30ಕ್ಕೆ ಆಟೋಟ ಸುರು. |
| ತಾರೀಖ್ 7-11-1999 ಐತ್ವಾರ | : | ಬೆಳ್ಗೆ 10-00 ಗಂಟೆಂದ ಸೆಮಿಫೈನಲ್ ಮತ್ತು ಫೈನಲ್ ಪಂದ್ಯಾಟ ಸುರು. |
| | : | ಮಧ್ಯಾಹ್ನ 2-00 ಗಂಟೆಂದ ಸಾಂಸ್ಕೃತಿಕ ಮತ್ತೆ ಸಭಾ ಕಾರ್ಯಕ್ರಮ |
| ಗ್ಯಾನ ಇಟ್ಟ್‌ಕ್ಕಣೆ | : | ಜನಾಂಗ ಬಾಂಧವ್ ಎರ್ಡ್ಡ್ ದಿನದಂದ್ ಬೆಳ್ಗೆ 9-00 ಗಂಟೆಗೆ ಮ್ಯಾನ್ಸ್ ಕಾಂಪೌಂಡ್‌ಲಿ ತಪ್ಪದೆ ಬಂದಿರಕು, ಮಧ್ಯಾನದ ಊಟಕ್ಕೆ ಬ್ಯಾರೆ ಬ್ಯಾರೆ ಕ್ಯಾಂಟೀನ್ ವ್ಯವಸ್ಥೆ ಮಾಡ್ಕೊಳೊ. |

## ಕಾರ್ಯಕ್ರಮಗ

| | | |
|---|---|---|
| ತಾರೀಖ್ 6-11-1999 | : | ಶನಿವಾರ ಆಟೋಟಗ : ಹಗ್ಗ ಎಳ್‌ದಾಡ್ವು ಗಂಡ್ಸ್‌ರ್‌ಗೆ, ಹೆಂಗ್ಸರ್‌ಗೆ (ಬ್ಯಾರೆ ಬ್ಯಾರೆ) ಟೀಮ್‌ಲಿ ಒಂದೇ ಕುಟುಂಬಕ್ಕೆ ಸೇರ್ದ್ವ ಏಳು ಜನ ಇರಕು.<br>ಎರ್ಡ್ ಚಕ್ರ ಗಾಡಿನ ಮೆಲ್ಲೆ ಓಡ್ಸ್‌ದು (ಮೋಟ್‌ರ್ ಬೈಕ್)<br>ವಿಸದ ಚೆಂಡಾಡ್ವು (ಹೆಣ್ಮಕ್ಕಳಿಗೆ)<br>100 ಮೀ. ಓಡ್ವು : ಹೈದಂಗ ಮತ್ತೆ ಗೂಡೆಗಳ್ಗೆ (5ರ್‌ಂದ 10 ವರ್ಷ ವಳಗಿನವ್‌ಕೆ)<br>50 ಮೀ. ಓಡ್ವು : ಹೈದಂಗ ಮತ್ತೆ ಗೂಡೆಗಳ್ಗೆ (5ವರ್ಷದ ವಳಗಿನವ್‌ಕೆ)<br>ಹೈಸ್ಕೂಲ್ ಮಕ್ಕಳಿಗೆ, ಜೂನಿಯರ್ ಕಾಲೇಜ್ ಮಕ್ಕಳಿಗೆ, ಕಾಲೇಜ್ ಮಕ್ಕಳಿಗೆ, ಜನಾಂಗದವ್‌ಕೆ (ಮುಕ್ತ), 100 ಮೀ. ಓಟ |
| ತಾರೀಖ್ 7-11-1999 ಐತ್ವಾರ | : | ಬೆಳ್ಗೆ ಸೆಮಿಫೈನಲ್ ಮತ್ತೆ ಫೈನಲ್ ಪಂದ್ಯಾಟ. ಮಧ್ಯಾನ ಮ್ಯಾಲೆ ಸಾಂಸ್ಕೃತಿಕ ಮತ್ತೆ ಸಭಾ ಕಾರ್ಯಕ್ರಮ |
| | : | ಪ್ರಾರ್ಥನೆ |
| | : | ಸ್ವಾಗತ |
| | : | ಅಧ್ಯಕ್ಷ ಸ್ಥಾನ ವಹಿಸುದು |
| | : | ಮುಖ್ಯ ನೆಂಟ್ರನ ಬರಮಾಡಿಕಂಬದು |
| | : | 1999ನೇ ವರ್ಷಲಿ ಬ್ಯಾರೆ ಬ್ಯಾರೆ ಕ್ಷೇತ್ರಲಿ ಪ್ರಶಸ್ತಿ ಪಡ್‌ದವ್‌ಕೆ ಸನ್ಮಾನ |
| | : | ನೆಂಟ್ರ್‌ಗಳ್‌ಂದ ಮಾತ್ |
| | : | ಅಧ್ಯಕ್ಷರ ಮಾತ್ |
| | : | ಲಾಟ್ರಿ ಡ್ರಾ |
| | : | ವಂದ್‌ಸುದು |

ತಮ್ಮ ವಿಶ್ವಾಸಿಗ

**ಅಧ್ಯಕ್ಷರ್ ಮತ್ತೆ ಆಡಳಿತ ಮಂಡಳಿಯವ್**

# ಕೊಡಗು ಸಂಗಾತಿ

ಸಂಪಾದಕಿ, ಪ್ರಕಾಶಕಿ :
**ಪಟ್ಟಡ ಪಿ. ಶೀಲಾಮಣಿ**

ಗೌರವ ಸಂಪಾದಕ :
**ಪಟ್ಟಡ ಎಂ. ಪ್ರಭಾಕರ**

ಚಂದಾ ಕಳುಹಿಸುವ ಮತ್ತು
ಜಾಹೀರಾತು ಪ್ರಸಾರ ಕಛೇರಿ :

**ಕೊಡಗು ಸಂಗಾತಿ**
ನಂ. 35, "ಸವಿತಾ ನಿಲಯ"
1ನೇ ಕ್ರಾಸ್, 4ನೇ ಬ್ಲಾಕ್,
ಜಯಲಕ್ಷ್ಮಿಪುರಂ, ಮೈಸೂರು - 570 012.
**ಫೋನ್ : 0821/516771**

**ಮಡಿಕೇರಿಯಲ್ಲಿ ಸಂಗಾತಿ ಕಛೇರಿ**

ಬೈತಡ್ಕ ಜಾನಕಿ ಬೆಳ್ಯಪ್ಪ
ನಂ. 21-16 ಎಲ್. ಐ. ಸಿ. ಹತ್ತಿರ
ರೇಸ್ ಕೋರ್ಸ್ ರಸ್ತೆ, ಮಡಿಕೇರಿ
ದೂರವಾಣಿ : 08272/28047

**ಸಂಪರ್ಕಿಸುವ ವಿಳಾಸ**

ಮಣಿ ನಂಗಾರ್
ಹೊಳ್ಳ ಕಾಂಪ್ಲೆಕ್ಸ್, ಮಂಗಳೂರು ರಸ್ತೆ,
ಚಿಕ್ಕಪೇಟೆ, ಮಡಿಕೇರಿ - 571 201
ದೂರವಾಣಿ : 08272/29372

ಕುಂಭಗೌಡನ ಸೋಮಣ್ಣ
ಮಯೂರ ಕೋಲ್ಡ್ ಸ್ಟೋರೇಜ್
ಮುಖ್ಯ ರಸ್ತೆ, ಕುಶಾಲನಗರ - 571 234
ದೂರವಾಣಿ : 08276/73370 (R.)

ಅಮ್ಮಾಜೀರ ಪೊನ್ನಪ್ಪ
20, 1ನೇ ಮೈನ್, 4ನೇ ಕ್ರಾಸ್
ಸಾಕಮ್ಮ ಗಾರ್ಡನ್, ಬಸವನಗುಡಿ,
ಬೆಂಗಳೂರು - 04
ದೂರವಾಣಿ - 080/6342822

ಕಲ್ಲುಮುಟ್ಲು ಬಸಪ್ಪ C/o ನಾರಾಯಣ
ನಂ. 233/9, 2ನೇ ಕ್ರಾಸ್, ನಂಜಪ್ಪ ಬ್ಲಾಕ್,
ಕೆಂಪೇಗೌಡ ನಗರ, ಬೆಂಗಳೂರು - 19
ದೂರವಾಣಿ - 080/6549669






**ಅರೆಭಾಷಿಕ ವಿಭಾಗ**



## ಚಂದಾ ವಿವರ

| | | |
|---|---|---|
| ಜೀವಾವಧಿ ಸದಸ್ಯತನ | - | 2000 ರೂ. |
| ವಾರ್ಷಿಕ ಚಂದಾ | - | 120 ರೂ. |
| ಅರ್ಧ ವಾರ್ಷಿಕ | - | 60 ರೂ. |
| ಬಿಡಿ ಪ್ರತಿ | - | 5 ರೂ. |

# ಸಂಪಾದಕೀಯ : ವಾಹನ ಪ್ರಯಾಣದ ಸಮಸ್ಯೆ :

ಮನುಷ್ಯ ನಾಗರೀಕತೆ ಹೊಂದಿದ್ದಾನೆ. ಅವನು ತನ್ನ ಸಮಯವನ್ನು ಉಳಿಸುವುದಕ್ಕಾಗಿ ವಾಹನಗಳನ್ನು ಬಳಸುವುದು ಅವಶ್ಯ. ಇದು ನಗರಗಳಲ್ಲಿ ಅತೀ ಅವಶ್ಯವಾಗಿದ್ದರೆ ಹಳ್ಳಿಗಳಲ್ಲೂ ಅವಶ್ಯಕತೆಇದೆ. ಆದರೆ ಮನುಷ್ಯ ಹತ್ತಿರ ಸ್ಥಳಗಳಿಗೆ ಹೋಗಲು ಬಸ್ಸು ಯಾ ರಿಕ್ಷಾಗಳಿಗೆ ಕಾದು ಕೂರುವ ಪರಿಸ್ಥಿತಿ ಆತನು ವಾಹನಗಳಲ್ಲಿಯೇ ಪ್ರಯಾಣ ಮಾಡಬೇಕೆಂಬ ಗೀಳು ಬರಬರುತ್ತಾ ಹೆಚ್ಚಾಗಿ ಮನುಷ್ಯ ಸೋಮಾರಿಯಾಗುತ್ತಿದ್ದಾನೆ. ಒಂದು ಕಿ. ಮೀ. ನಡೆದು ಹೋಗುವ ಪ್ರಯಾಣಕ್ಕೆ ಗಂಟೆಗಟ್ಟಲೆ ಬಸ್ಸಿಗಾಗಿ ಕಾದು ಬಸ್ಸಿನ ಪ್ರಯಾಣ ಮಾಡುವರು ಎಷ್ಟೋ ಜನರಿದ್ದಾರೆ. ಈ ರೀತಿಯ ಗೀಳು ಒಬ್ಬ ವ್ಯಕ್ತಿಯ ಅಥವಾ ಸಮಾಜಕ್ಕೆ ಪ್ರಗತಿಯ ದಾರಿ ಎಂದು ಹೇಳಲು ಸಾಧ್ಯವಿಲ್ಲ, ಇದರಿಂದ ಜನರಲ್ಲಿ ಜಡತೆ ಉಂಟಾಗುತ್ತದೆ.

ಪಾಶ್ಚಾತ್ಯದೇಶಗಳಲ್ಲಿ ಅದರಲ್ಲೂ ಅಮೇರಿಕಾದಂತಹ ಐಶ್ವರ್ಯವಂತ ದೇಶಗಳಲ್ಲಿ ಪ್ರತಿಯೊಬ್ಬ ವ್ಯಕ್ತಿ ಯಾ ಕುಟುಂಬಕ್ಕೆ ವಾಹನ ಇದ್ದೆ ಇರುತ್ತದೆ ಎಂಬ ವಿಷಯ ಸತ್ಯ. ಇದರಿಂದಾಗಿ ವಾಯು ಮಾಲಿನ್ಯ ಹೆಚ್ಚಾಗುತ್ತಿದೆ. ಇದೇ ರೀತಿ ಭಾರತದ ನಗರ ಪಟ್ಟಣಗಳಲ್ಲೂ ಇದೇ ಸಮಸ್ಯೆಯಾಗಿದೆ. ಅತೀ ಸಂಖ್ಯೆಯ ವಾಹನಗಳಿಂದಾಗಿ ನಗರಗಳಲ್ಲಿ ವಾಹನ ಚಾಲನಾ ಸಮಸ್ಯೆಗಳು ಹೆಚ್ಚಾಗುತ್ತಿವೆ. ಇದಕ್ಕೆಲ್ಲಾ ಕಾರಣ ಪ್ರತಿಯೊಬ್ಬ ವ್ಯಕ್ತಿಗೂ ವಾಹನ ಹೊಂದುವ ಗೀಳಿನಿಂದಾಗಿ ಸೋಮಾರಿತನ ಹೆಚ್ಚಾಗುತ್ತಾ ಬರುತ್ತಿದೆ. ಹಿಂದೆ ಮೈಲುಗಟ್ಟಲೆ ಕಾಲು ನಡುಗೆಯಲ್ಲೇ ಹೋಗುತ್ತಿದ್ದ ಪರಿಸ್ಥಿತಿ ಇತ್ತು. ಆ ರೀತಿ ಈಗಲೂ ಇರಬೇಕೆಂಬ ಅರ್ಥ ಅಲ್ಲ, ಆದಷ್ಟು ವಾಹನದಲ್ಲಿಯೇ ಪ್ರಯಾಣ ಮಾಡಬೇಕೆಂಬ ಗೀಳು ಕಡಿಮೆಯಾದರೆ ವಾಹನಕ್ಕಾಗಿ ಖರ್ಚಾಗುವ ಡೀಸೆಲ್ ಪೆಟ್ರೋಲ್ ಖರ್ಚು ಕಡಿಮೆಯಾಗುವುದು. ವಾಯುಮಾಲಿನ್ಯವು ಕಡಿಮೆಯಾಗಿ ಅತೀ ಅವಶ್ಯವಿರುವ ಕಾರ್ಯಗಳಿಗೆ ತುರ್ತಾದ ವಿಷಯಗಳಿಗೆ ವಾಹನ ಉಪಯೋಗಿಸಿದರೆ ಪ್ರತಿಯೊಬ್ಬರಿಗೂ ಕ್ಷೇಮ. ಇದಲ್ಲದೆ ಪ್ರತಿಷ್ಠೆಗಾಗಿ ದೊಡ್ಡಸ್ಥಿಕೆಗಾಗಿ ¼ ಕಿ. ಮೀಟರ್ ಹೋಗುವದಕ್ಕೆ ವಾಹನಕ್ಕಾಗಿ ಕಾಯುವ ಹೋಗುವ ಪರಿಸ್ಥಿತಿ ತಪ್ಪಬೇಕು ಎಂಬುದಾಗಿ ಸಂಗಾತಿಯ ಸಲಹೆ.

## ಕೊಡಗು ಗೌಡ ವಿದ್ಯಾರ್ಥಿ ವೇತನ ನಿಧಿ ಸಂಗ್ರಹಕ್ಕಾಗಿ ಮನವಿ :

(ಕೊಡಗು ಗೌಡ ವಿದ್ಯಾಸಂಘ (ರಿ) ಮಡಿಕೇರಿ, ಗುಡ್ಡೆಮನೆ ಅಪ್ಪಯ್ಯ ಗೌಡ ರಸ್ತೆ, ಮಡಿಕೇರಿ)

ಕೊಡಗು ಗೌಡ ವಿದ್ಯಾ ಸಂಘವು ಗೌಡ ಜನಾಂಗದ ಪ್ರತಿಭಾವಂತ ಮತ್ತು ಬಡವಿದ್ಯಾರ್ಥಿಗಳನ್ನು ವಿದ್ಯಾರ್ಜನೆಗೆ ಪ್ರೋತ್ಸಾಹಿಸುವಲ್ಲಿ ವಿದ್ಯಾರ್ಥಿವೇತನ ನಿಧಿಯನ್ನು ಸ್ಥಾಪಿಸಿರುವುದು ಸರಿಯಷ್ಟೆ. ಸದ್ರಿ ನಿಧಿಯು ಖಾಯಂ ಮತ್ತು ಶಾಶ್ವತವಾಗಿ ನಡೆದು ಬಂದು ಅದರಿಂದ ಬರುವ ಬಡ್ಡಿಯಿಂದ ಮಾತ್ರ ಪ್ರತಿ ವರ್ಷ ದಾನಿಗಳ ಹೆಸರಿನಲ್ಲಿ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ಕೊಡಲಾಗುತ್ತಿದೆ. 1977ರಲ್ಲಿ ದಿ. ಪಟ್ಟಡ ನೀಲವ್ವ ಮುತ್ತಣ್ಣ ಸ್ಮಾರಕ ವಿದ್ಯಾರ್ಥಿವೇತನ ನಿಧಿಯಿಂದ ಪ್ರಾರಂಭವಾಗಿ ಇಂದು ಸುಮಾರು 104 ದಾನಿಗಳಿಂದ ಸಂಗ್ರಹಿಸಿದ ಮೊತ್ತವು ಈಗಾಗಲೇ ರೂ. 7,338/-ಗಳನ್ನು ದಾಟಿದೆ. ಸಂಘದ ಈ ಮೇಲ್ಕಂಡ ನಿಧಿಯ ಗುರಿಯು ಸುಮಾರು 10 ಲಕ್ಷಕ್ಕೆ. ಮೇಲ್ಪಟ್ಟು ಇರುವುದರಿಂದ ಅರೆಭಾಷಿಕ ಜನಾಂಗದ ಹತ್ತು ಕುಟುಂಬ ಹದಿನೆಂಟು ಗೋತ್ರದ ವ್ಯಾಪ್ತಿಗೆ ಒಳಪಡುವ ಸರ್ವ ಕೊಡುಗೈ ಮಹಾದಾನಿಗಳಿಂದ ನಿಧಿಯನ್ನು ವೃದ್ಧಿಸುವತ್ತ ಮನವಿಯನ್ನು ಮಾಡಲಾಗಿದೆ. ದೇಶ, ವಿದೇಶದ ನಾನಾ ಭಾಗಗಳಲ್ಲಿ ವಾಸಿಸುವ ಜನಾಂಗದ ಹಿತೈಷಿಗಳು ಉದಾರ ಮನಸ್ಸಿನಿಂದ ತಮ್ಮ ತನು-ಮನ-ಧನವನ್ನು ನೀಡಿ ಸಹಕರಿಸುವುದು. ದಾನಿಗಳು ಕನಿಷ್ಟ ರೂ 1000/-ಕ್ಕಿಂತಲೂ ಮತ್ತು ಹೆಚ್ಚಿನ ಮೊತ್ತವನ್ನು ನೀಡಬಹುದು. ಅಂತಹವರ ಹೆಸರನ್ನು ದಾನಿಗಳ ಪಟ್ಟಿಯಲ್ಲಿ ಸೇರಿಸುವುದಲ್ಲದೆಯೆ ಆಗಿಂದಾಗೆ ಕೊಡಗು ಸಂಗಾತಿ ಪಾಕ್ಷಿಕ ಪತ್ರಿಕೆಯಲ್ಲಿ ಪ್ರಕಟ ಪಡಿಸಲಾಗುವುದು. ಜನಾಂಗದ ಪ್ರತಿಭಾವಂತ ವಿದ್ಯಾರ್ಥಿಗಳನ್ನು ಹೆಕ್ಕಿ IAS, IPS. ಅಧಿಕಾರಿಗಳನ್ನು ಹುಟ್ಟು ಹಾಕುವ ದಿಸೆಯಲ್ಲೂ ಹಾಗೂ ಅರೆಭಾಷೆ ಮತ್ತು ಸಂಸ್ಕೃತಿ, ಸಂಪ್ರದಾಯಗಳ ಬಗ್ಗೆ ಸಂಶೋಧನೆ ಮಾಡುವ ವಿದ್ಯಾರ್ಥಿಗಳಿಗೂ ಧನ ಸಹಾಯ ಮಾಡುವ ಇರಾದೆಯು ಸಹ ಈ ಸಂಘದ ಗುರಿಯಾಗಿದೆ.

ವಿದ್ಯೆಯೇ ಅದಿ ದೇವತೆ, ಜನಾಂಗದ ಐಕ್ಯತೆಯೇ ದೇಶದ ಪ್ರಗತಿ, ಸಂಘಟನೆಯೇ ನಮ್ಮ ಧ್ಯೇಯ.

D.D./Cheque ಕಳುಹಿಸುವ ವಿಳಾಸ :

ಅಧ್ಯಕ್ಷರು
ಕೊಡಗು ಗೌಡ ವಿದ್ಯಾಸಂಘ (ರಿ.)
ಗುಡ್ಡೆಮನೆ ಅಪ್ಪಯ್ಯ ಗೌಡ ರಸ್ತೆ,
ಮಡಿಕೇರಿ, ಕೊಡಗು ಜಿಲ್ಲೆ - 571 201
ಪ್ರಕಟಣೆ : ಅಧ್ಯಕ್ಷರು ಮತ್ತು ಆಡಳಿತ ಮಂಡಳಿ
ದೂರವಾಣಿ : 08272/29906

---

ಕೊಡಗು ಸಂಗಾತಿಯಿಂದಾಗಿ ಜನರಲ್ಲಿ ಜಾಗೃತಿ ಮೂಡಿದೆ. ನಮ್ಮತನ ಬೆಳೆದಿದೆ, ಒಗ್ಗಟ್ಟು ಹೆಚ್ಚಿದೆ, ಯುವ ಜನಾಂಗಕ್ಕೆ ಹುರುಪು ಬಂದಿದೆ, ಸಂಸ್ಕೃತಿ ಬಗ್ಗೆ ಅಭಿಮಾನ ಬಂದಿದೆ. ಇದೊಂದು ಶುಭ ಸೂಚನೆ.

ಪ್ರೊ. ಪೂಜಾರಿ ಮೊಣ್ಣಪ್ಪ.

# ಆರೋಗ್ಯ ಚಿಂತನೆ

## ಮಕ್ಕಳಲ್ಲಿ ಅಂಗವಿಕಲತೆ ಹಾಗೂ ಬುದ್ಧಿಮಾಂದ್ಯತೆ :

ಕೆಲವೊಮ್ಮೆ ಮಗು ಹುಟ್ಟುವಾಗಲೇ ಕಿವುಡಾಗಿರಬಹುದು. ಬುದ್ಧಿಮಂದ ಇರಬಹುದು ಅಥವಾ ದೇಹದ ಯಾವುದೇ ಅಂಗ ಊನವಾಗಿರಬಹುದು. ಇಂತಹ ಸಂದರ್ಭದಲ್ಲಿ ಪೋಷಕರು ಧೃತಿಗೆಟ್ಟು ಚಿಂತಾಜನಕರಾಗುವುದು ಸಾಮಾನ್ಯ. ಇದೊಂದು ಶಾರೀರಿಕ ಸಮಸ್ಯೆಗಿಂತಲೂ ಸಾಮಾಜಿಕ ಸಮಸ್ಯೆಯಾಗಿದೆ. ಜನರು ಇಂತವರನ್ನು ಕೀಳಾಗಿ ಕಾಣುವುದರಿಂದ ಸಹಜವಾಗಿ ಇಂತಹ ಮಕ್ಕಳ ಮಾನಸಿಕ ಮತ್ತು ಸಾಮಾಜಿಕ ಬೆಳವಣಿಗೆ ಕುಂಠಿತವಾಗುವುದು. ಆದ್ದರಿಂದ ಪೋಷಕರು ಇದನ್ನು ಧೈರ್ಯವಾಗಿ ಎದುರಿಸಬೇಕು. ಇಂತಹ ಮಕ್ಕಳಿಗೆ ಬೇರೆ ಶಕ್ತಿಗಳನ್ನು ವಿಕಾಸ ಮಾಡಿಕೊಳ್ಳಲು ತಕ್ಕ ವಾತಾವರಣ ಸೃಷ್ಟಿಸಿಕೊಟ್ಟು, ಎಲ್ಲ ಮಕ್ಕಳಂತೆಯೇ ನೋಡಿಕೊಳ್ಳಬೇಕು. ಅವರಿಗೂ ಸಮಾಜದಲ್ಲಿ ಸ್ಥಾನವಿದೆ ಅನ್ನುವುದನ್ನು ತೋರಿಸಬೇಕು.

ಅಂಗವಿಕಲರಿಗೆ ಬೇಕಾಗಿರುವುದು ನಿಮ್ಮ ಅನುಕಂಪ. ಕರುಣೆಯಲ್ಲ. ಬದಲಾಗಿ ನಿಮ್ಮ ಪ್ರೋತ್ಸಾಹ ಹಾಗೂ ಉತ್ತೇಜನ. ಇಂದು ಅನೇಕ ಅಂಗವಿಕಲರು ಮುಂದೆ ಬಂದು, ಇತರರು ಅಸಾಧ್ಯವೆಂಬುದನ್ನು ಸಾಧಿಸಿದ್ದಾರೆ. ಈ ಮಕ್ಕಳಿಗೆ ತಕ್ಕ ಚಿಕಿತ್ಸೆ ಆಗಲು ಅನೇಕ ಸಂಶೋಧನೆಗಳು ದಿನಂಪ್ರತಿ ನಡೆಯುತ್ತಿದೆ. ಇಂತವರಿಗೆ ಸರ್ಕಾರಿ ವೆಚ್ಚದಲ್ಲಿ ಇಂದು ವಿಶೇಷ ಶಾಲೆಗಳಿವೆ. ಕಿವುಡು ಮಕ್ಕಳಿಗೆ ಪ್ರತ್ಯೇಕವಾದ ಸೌಲಭ್ಯಗಳಿರುವ ಶಾಲೆಗಳಲ್ಲಿ ತರಬೇತು ಕೊಡಬೇಕು. ಶ್ರವಣಮಾಪಕ ಮತ್ತು ಶ್ರವಣಶ್ರಾವಕ ಸಲಕರಣೆಗಳು ಅಗತ್ಯವಾಗಿ ಬೇಕು. ತುಟಿಭಾಷೆ, ಮಾತಿನ ತಿದ್ದುಪಡಿ ಬೇಕಾಗುವುದು. ಕುರುಡು ಮಕ್ಕಳಿಗೆ ಬ್ರೇಲ್ ಪದ್ಧತಿಯ ಶಿಕ್ಷಣ ಬೇಕು. ಅಂಗವಿಕಲರಿಗೆ ಅವರ ಊನಕ್ಕೆ ಅನುಗುಣವಾಗಿ ಬೇರೆ ಆಟದ ವ್ಯವಸ್ಥೆ ಬೇಕಾಗುವುದು. ಬುದ್ಧಿಮಾಂದ್ಯ ಮಕ್ಕಳಿಗೆ, ಅವರ ಬುದ್ಧಿಗೆ ತಕ್ಕಂತೆ ಶಿಕ್ಷಣ ಬೇಕು. ಅಂಗವಿಕಲರಿಗೆ ಸರಕಾರದಿಂದ ಪ್ರತಿ ತಿಂಗಳೂ ಸಹಾಯಧನ ನೀಡುವ ಸೌಲಭ್ಯವಿದೆ. ಇವುಗಳ ಸಂಪೂರ್ಣ ಪ್ರಯೋಜನವನ್ನು ಪಡೆದುಕೊಳ್ಳಬೇಕು.

ಬುದ್ಧಿಮಾಂದ್ಯತೆ, ಅಂಗವಿಕಲತೆ ಇದ್ದಲ್ಲಿ ಪೋಷಕರು ಮೊದ ಮೊದಲಿಗೆ ಅದನ್ನು ಯಾರಿಗೂ ತೋರ್ಪಡಿಸಲು ಇಚ್ಛಿಸುವುದಿಲ್ಲ. ನಂತರ ಒಳ್ಳೆಯ ವೈದ್ಯರಿಗೆ ತೋರಿಸಿದರಾಯಿತು ಎಂಬುದಾಗಿ ನಿರ್ಲಕ್ಷಿಸುತ್ತಾರೆ. ಇದು ತಮ್ಮ ಹಣೆ ಬರಹ ಎಂದು ಹರಕೆ ಹೊತ್ತು, ಪೂಜಾರಿ, ಮಂತ್ರವಾದಿಗಳ ಹತ್ತಿರ ಚಿಕಿತ್ಸೆಗಾಗಿ ಕರೆದೊಯ್ಯುವ ಪದ್ಧತಿಯೂ ಸಾಮಾನ್ಯ ! ಈ ರೀತಿ ಅಮೂಲ್ಯವಾದ ಸಮಯವನ್ನು ಹಾಳುಮಾಡಿಕೊಂಡು, ಕೊನೆ ಹಂತದಲ್ಲಿ ವೈದ್ಯರ ಮೊರೆ ಹೋಗುತ್ತಾರೆ. ಇಂತಹ ಮಕ್ಕಳಿಗೆ ಸೂಕ್ತ ಸಮಯದಲ್ಲಿ ಸರಿಯಾದ ಮಾರ್ಗದರ್ಶನ, ಪ್ರಚೋದನೆ ಅಗತ್ಯ. ಇದನ್ನು ಎಷ್ಟು ಬೇಗ ಸಾಧ್ಯವೋ ಅಷ್ಟು ಬೇಗ ಅಳವಡಿಸಿಕೊಳ್ಳುವುದರಿಂದ ಪರಿಣಾಮ ಜಾಸ್ತಿ. ಇಂತವರಲ್ಲಿ ಆತ್ಮವಿಶ್ವಾಸದ ಕೊರತೆಯಿರುತ್ತದೆ. ಆದ್ದರಿಂದ ಇವರಿಗೆ ಎಲ್ಲಾ ಹಂತದಲ್ಲೂ ಪ್ರೋತ್ಸಾಹ ಅತ್ಯಗತ್ಯ.

ಬುದ್ಧಿಮಾಂದ್ಯತೆ ಅಥವಾ ಯಾವುದೇ ಅಂಗವಿಕಲತೆಯನ್ನು ತಡೆಗಟ್ಟಲು ಸಹಾಯವಾಗುವಂತೆ ಕೆಳಗಿನ ಕ್ರಮಗಳನ್ನು ಅನುಸರಿಸಬೇಕು.

೧. ರಕ್ತ ಸಂಬಂಧಿಗಳಲ್ಲಿ ಮದುವೆ ಆಗಬೇಡಿ.

೨. ಒಂದು ಮಗು ಅಂಗವಿಕಲತೆಯೊಂದಿಗೆ ಹುಟ್ಟಿದರೆ, ಹಾಗೂ ಈಗಾಗಲೇ ಒಂದು ಆರೋಗ್ಯವಂತ ಮಗು ಇದ್ದಲ್ಲಿ ಮತ್ತೆ ಮಕ್ಕಳನ್ನು ಹೆರುವ ಯೋಚನೆ ಮಾಡಬೇಡಿ.

೩. 35ನೇ ವರ್ಷದ ನಂತರ ಮಕ್ಕಳಾಗದಂತೆ ನಿಮ್ಮ ಪರಿವಾರವನ್ನು ಯೋಜಿಸಿ.

೪. ಗರ್ಭಿಣಿ ಪೌಷ್ಟಿಕ ಆಹಾರದ ಕೊರತೆಯಿಂದ ಬಳಲುತ್ತಿದ್ದರೆ ಬುದ್ಧಿಮಂದವಾಗಿರುವ ಮಕ್ಕಳು ಹುಟ್ಟುವ ಸಾಧ್ಯತೆ ಇದೆ. ತಿನ್ನುವ ಉಪ್ಪಿನಲ್ಲಿ ಅಯೋಡಿನ್ ಇರಲಿ. ಇಲ್ಲದಿದ್ದಲ್ಲಿ ಮಗು ಕ್ರಿಟೆನಿಸಮ್‌ನಿಂದ ಬಳಲಬಹುದು..

೫. ಗರ್ಭಿಣಿ ಆಗಿದ್ದಾಗ ಸಿಗರೇಟು ಸೇವನೆ, ಕುಡಿತ ಸಲ್ಲದು.

೬. ಗರ್ಭಿಣಿ ಆಗಿದ್ದಾಗ ಅನವಶ್ಯಕ ಔಷಧಿ ಸೇವಿಸುವುದು ಸಲ್ಲದು. ಅದೂ ಮೊದಲ ಮೂರು ತಿಂಗಳಲ್ಲಿ ತುಂಬಾ ಜಾಗರೂಕವಾಗಿರಬೇಕು. ವೈದ್ಯರ ಸಲಹೆಯಿಲ್ಲದೆ ಯಾವುದೇ ಔಷಧವನ್ನು ಸೇವಿಸಬಾರದು. (ವೈದ್ಯರ ಬಳಿ ನೀವು ಗರ್ಭಿಣಿ ಯಾಗಿರುವುದರ ಬಗ್ಗೆ ತಪ್ಪದೆ ತಿಳಿಸಬೇಕು.)

೭. ಗರ್ಭಿಣಿ ಸಮಯದಲ್ಲಿ ಅನವಶ್ಯಕ ಕ್ಷ-ಕಿರಣ ಪರೀಕ್ಷೆಗೆ ಒಳಗಾಗುವುದು ಸಲ್ಲದು

೮. ರೋಗ ನಿರೋಧಕ ಚುಚ್ಚುಮದ್ದನ್ನು ತಪ್ಪ[illegible] ಸರಿಯಾದ ಸಮಯದಲ್ಲಿ ಮಕ್ಕಳಿಗೆ ಹಾಕಿ[illegible]

೯. ಹೆರಿಗೆ ಸಮಯದಲ್ಲಿ ಮಗುವಿನ ತಲೆಗೆ ಪೆಟ್ಟಾಗುವಿಕೆ, ಮಗು ಹುಟ್ಟಿದ ಕೂಡಲೇ ಅಳದೆ ಇರುವಿಕೆ (ಮಗುವಿನ ಮೆದುಳಿಗೆ ಸರಿಯಾದ ಪ್ರಮಾಣದಲ್ಲಿ ರಕ್ತ ಸರಬರಾಜು ಹುಟ್ಟಿದ ಸ್ವಲ್ಪ ಸಮಯದ ನಂತರವೂ ಆಗದಿದ್ದಲ್ಲಿ) ಸಹ ಮುಂದೆ ಬುದ್ಧಿಮಾಂದ್ಯತೆ ಉಂಟಾಗಬಹುದು. ಆದ್ದರಿಂದ ತಜ್ಞವೈದ್ಯರ ನೆರವಿನಿಂದ ಹೆರಿಗೆ [illegible] ಕ್ಷೇಮಕರ

ಒಟ್ಟಿನಲ್ಲಿ ಅಂಗವಿಕಲರಿಗೆ ಹಾಗೂ ಬುದ್ಧಿಮಾಂದ್ಯರಿಗೆ ಸರಿಯಾದ ಪ್ರೋತ್ಸಾಹ ಹಾಗೂ ಉತ್ತೇಜನ [illegible] ಸರಕಾರದ ಹಾಗೂ ಎಲ್ಲ ಜನರ ಆದ್ಯ ಕರ್ತವ್ಯವಾಗಿದೆ.

ಡಾ. ಪ್ರವೀಣ [illegible]
M.B.B.S., M.D. (OBG), D.N.B
ಕೇರಳ

# ಸುಂದರ ಭಾರತದ ರಾಷ್ಟ್ರೀಯ ಸಂಕೇತಗಳು

**1. ರಾಷ್ಟ್ರಧ್ವಜ :** ಕಣ್ಮನಗಳನ್ನು ಸೆಳೆಯುವ ತ್ರಿವರ್ಣಗಳನ್ನು ಹೊಂದಿದ ಧ್ವಜ ನಮ್ಮದು. ಮೇಲ್ಭಾಗದಲ್ಲಿ ಕೇಸರಿ, ಮಧ್ಯದಲ್ಲಿ ಬಿಳಿ ಹಾಗೂ ಕೆಳಭಾಗದಲ್ಲಿ ಹಸಿರು ವರ್ಣಗಳನ್ನು ಸಮ ಪ್ರಮಾಣದಲ್ಲಿ ನಮ್ಮ ರಾಷ್ಟ್ರಧ್ವಜವು ಹೊಂದಿದೆ. ಬಿಳಿಯ ಬಣ್ಣದ ಮಧ್ಯಭಾಗದಲ್ಲಿ ನೀಲವರ್ಣದ ಚಕ್ರವಿದೆ. ರಾಷ್ಟ್ರಧ್ವಜದ ಉದ್ದ ಹಾಗೂ ಅಗಲಗಳ ಪ್ರಮಾಣವು 2:3ರಷ್ಟು. 24ಕಡ್ಡಿಗಳನ್ನು ಹೊಂದಿದ ಚಕ್ರವು, ಸಾರನಾಥದಲ್ಲಿನ ಅಶೋಕ ಚಕ್ರವರ್ತಿಯ ಸಿಂಹಲಾಂಛನದಲ್ಲಿ ಕಂಡುಬರುತ್ತದೆ.

**2. ರಾಷ್ಟ್ರಲಾಂಛನ :** ಉತ್ತರ ಪ್ರದೇಶದ ವಾರಣಾಸಿಯ ಬಳಿಯಿರುವ ಸಾರನಾಥದಲ್ಲಿರುವ ಅಶೋಕನಸ್ತಂಭದಿಂದ ಭಾರತದ ರಾಷ್ಟ್ರಲಾಂಛನವನ್ನು ಆಯ್ದುಕೊಳ್ಳಲಾಗಿದೆ. ತೆರೆದ ಬಾಯಿಯನ್ನು ಹೊಂದಿರುವ ಮೂರು ಸಿಂಹಗಳನ್ನು ನಮ್ಮ ರಾಷ್ಟ್ರ ಲಾಂಛನವು ಹೊಂದಿದೆ. ಕೆಳಭಾಗದ ಸ್ಥಾನದಲ್ಲಿ 24 ಕಡ್ಡಿಗಳನ್ನು ಹೊಂದಿರುವ ಚಕ್ರವಿದೆ. ರಾಷ್ಟ್ರಲಾಂಛನವು "ಸತ್ಯಮೇವ ಜಯತೆ" ಎಂಬ ಅಕ್ಷರಗಳನ್ನು ಅಳವಡಿಸಿಕೊಂಡಿದೆ.

**3. ರಾಷ್ಟ್ರಗೀತೆ :** ಕವಿ ರವೀಂದ್ರನಾಥ ಟ್ಯಾಗೋರ್ ಅವರಿಂದ ರಚಿಸಲ್ಪಟ್ಟ "ಜನಗಣಮನ" ವು ನಮ್ಮ ರಾಷ್ಟ್ರಗೀತೆ. ಈ ಗೀತೆಯನ್ನು ಪ್ರಪ್ರಥಮವಾಗಿ ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನ ಕಲ್ಕತ್ತಾ ಅಧಿವೇಶನದಲ್ಲಿ ಡಿಸೆಂಬರ್27, 1911ರಲ್ಲಿ ಹಾಡಲಾಯಿತು. 1950ರ ಜನವರಿ 24ರಂದು "ಜನಗಣಮನ"ವನ್ನು ಭಾರತ ರಾಜ್ಯಾಂಗ ಸಭೆಯು ರಾಷ್ಟ್ರಗೀತೆಯೆಂದು ಅಂಗೀಕಾರ ನೀಡಿತು. "ಜನಗಣಮನ" ವನ್ನು ಸಂಪೂರ್ಣವಾಗಿ ಹಾಡಲು 52 ಸೆಕೆಂಡುಗಳು ಕಾಲಾವಕಾಶ ಬೇಕು.

**4. ರಾಷ್ಟ್ರೀಯ ಹಾಡು :** ಬಂಗಾಲಿ ಕವಿಶ್ರೇಷ್ಠರಾದ ಬಂಕೀಂ ಚಂದ್ರ ಚಟರ್ಜಿಯವರ "ವಂದೇ ಮಾತರಂ" ನಮ್ಮ ರಾಷ್ಟ್ರೀಯ ಹಾಡು. ಈ ಹಾಡು ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ ವೀರ ಸ್ವಾತಂತ್ರ್ಯ ಯೋಧರನ್ನು ಕ್ರಾಂತಿಯ ಸರದಾರರನ್ನಾಗಿ ಉತ್ಸಾಹ ತುಂಬಲು ರಚಿಸಲ್ಪಟ್ಟ ಹಾಡು. ಈ ಹಾಡನ್ನು ಪ್ರಪ್ರಥಮವಾಗಿ 1896ರ ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನ ಅಧಿವೇಶನದಲ್ಲಿ ಹಾಡಲಾಯಿತು.

**5. ರಾಷ್ಟ್ರೀಯ ಪ್ರಾಣಿ :** 'ಹುಲಿ' ಭಾರತದ ರಾಷ್ಟ್ರೀಯ ಪ್ರಾಣಿಯಾಗಿದೆ. ಅನೇಕ ಪುರಾಣ ಹಾಗೂ ದಂತ ಕತೆಗಳಲ್ಲಿ ಹುಲಿಯು ನಾಯಕನಾಗಿದೆ. ತನ್ನ ಮನಾಕರ್ಷಕ ಬಣ್ಣ, ಘರ್ಜನೆಯ ಧ್ವನಿ, ಗಾಭೀರ್ಯದ ನಡಿಗೆ, ಅಪ್ರತಿಮ ಶೌರ್ಯ ಹಾಗೂ ಬಲಗಳಿಂದ ಹುಲಿಯು ಪ್ರಾಣಿಗಳಲ್ಲಿಯೇ ಪ್ರತ್ಯೇಕತೆಯನ್ನು ಪಡೆದುಕೊಂಡು, ಭಾರತೀಯರಲ್ಲಿ ಶೌರ್ಯ ಹಾಗೂ ಸಾಹಸಗಳ ಹುರಿದುಂಬಿಸುವ ಸಾಮರ್ಥ್ಯ ಈ ಪ್ರಾಣಿಯದ್ದು.

**6. ರಾಷ್ಟ್ರೀಯ ಪಕ್ಷಿ :** ಮನಮೋಹಕವಾಗಿರುವ ನವಿಲು ಭಾರತದ ರಾಷ್ಟ್ರೀಯ ಪಕ್ಷಿ ಗಂಡು ಪಕ್ಷಿಗಳಲ್ಲಿಯೇ ಅತ್ಯಂತ "ಸುರಸುಂದರ"ನಾಗಿರುವ ನವಿಲು, ತನ್ನ ಹೊಳೆಯುವ ಉದ್ದವಾದ ಕತ್ತು ಹಾಗೂ ಚಿತ್ತಾಕರ್ಷಕ ರೂಪದ ರಂಗು-ರಂಗಾದ ಗರಿಗಳಿಂದ ಪಕ್ಷಿಗಳಲ್ಲಿಯೇ ವಿಬಿನ್ನ. ಭಾರತದ ಪುರಾಣ, ದಂತ ಕಥೆ ಹಾಗೂ ಪ್ರಣಯ ಕಾವ್ಯಗಳಲ್ಲಿಯೇ ನವಿಲು ಅಗ್ರಸ್ಥಾನವನ್ನು ಹೊಂದಿದೆ. ನವಿಲು ನೋಡಿದರೆ ಸಾಕು; ಕವಿಗಳಿಗೆ ಸ್ಫೂರ್ತಿ ಉಕ್ಕಿ ಬಂದು, ಸಾವಿರಾರು ಕವನಗಳು ಸೃಷ್ಟಿಯಾಗಿ ಬಿಡುತ್ತವೆ. ನವಿಲಿನ ನಾಟ್ಯದ ನೋಟವಂತೂ ಅವರ್ಣನೀಯ! ಇಂತಹ ವೈವಿಧ್ಯತೆಯ ನವಿಲೇ ನಮ್ಮ ರಾಷ್ಟ್ರಪಕ್ಷಿಯಾಗಿದೆ.

**7. ರಾಷ್ಟ್ರಪುಷ್ಪ :** ಕಮಲ - ಭಾರತದ ರಾಷ್ಟ್ರೀಯ ಪುಷ್ಪ. ಕೆರೆ ಹಾಗೂ ಸರೋವರಗಳ ಮೇಲ್ಭಾಗದ ತೆಲುವಂತೆ ಕಾಣುವ ಸ್ವಲ್ಪ ವಿಸ್ತಾರವಾಗಿಯೇ ಇರುವ ಕೋಮಲ ಪುಷ್ಪ. ಸೌಂದರ್ಯದ ಸೃಷ್ಟಿ! ಈ ಜಗತ್ತಿನ ಎಲ್ಲಾ ವಿಪತ್ತುಗಳಿಂದ ಪಾರಾಗಿ, ಎತ್ತರೆತ್ತರವಾಗಿ ಬೆಳೆದು, "ಜೀವನ"ವೆಂಬ ನೀರಿನ ಮೇಲ್ಭಾಗವನ್ನು ಮೀರಿ ನಿಲ್ಲುವ ಸಾಂಕೇತಿಕ ಸತ್ಯವನ್ನು ಕಮಲವು ಸಾರುತ್ತದೆ.

**8. ರಾಷ್ಟ್ರೀಯ ಪಂಚಾಂಗ :** ಚೈತ್ರಮಾಸದಿಂದ ಆರಂಭಗೊಳ್ಳುವ 365ದಿನಗಳನ್ನು ಹೊಂದಿರುವ ರಾಷ್ಟ್ರೀಯ ಕ್ಯಾಲೆಂಡರನ್ನು, ಗ್ರಿಗೋರಿಯನ್ ಕ್ಯಾಲೆಂಡರಿನೊಂದಿಗೆ 1952ರ ಮಾರ್ಚ್ 22ರಂದು ಅಂಗೀಕರಿಸಲಾಯಿತು. ಚೈತ್ರ ಮಾಸದ ಪ್ರಥಮ ದಿನವು ಗ್ರಿಗೋರಿಯನ್ ಕ್ಯಾಲೆಂಡರಿನಲ್ಲಿ ಸಾಮಾನ್ಯವಾಗಿ ಮಾರ್ಚ್ 22ರಂದು ಆರಂಭವಾಗುವುದು.

**ಸಂಗ್ರಹ : ಯಾಲದಾಳು. ಈ. ಚಂದ್ರಕಲಾ, ಮಡಿಕೇರಿ.**

## ಹನಿಗವನ

**ಓದು**

ಆಗಬೇಕಿದ್ದರೆ ವಿದ್ಯೆ ಸಾರ್ಥಕ  
ಗಳಿಸಬೇಕು ಹೆಚ್ಚಿನ ಅಂಕ  
ಅದಕ್ಕಾಗಿ ಓದಬೇಕು ಸದಾ ಪುಸ್ತಕ  
ಓದಿ ಓದಿ ಕೆಡುತ್ತಿದೆ ನನ್ನ ಪುಸ್ತಕ

**ಯುದ್ಧ**

ಕೊಲ್ಲಿಯುದ್ಧ ಜಗತ್ತನ್ನೇ ಕೊಲ್ಲುವ ಯುದ್ಧ  
ಅದ್ವಿತೀಯ ಮೂರನೆ ಮಹಾಯುದ್ಧ  
ಸದ್ದಾಂ ಬುಷ್ ಇತಿಹಾಸಕ್ಕೆ ಬದ್ಧ  
ಎಲ್ಲಿದ್ದಾನೆ ಶಾಂತಿ ತರಲು ಬುದ್ಧ

**ಕೆ. ಆರ್. ಲೇಖ ರವಿಕುಮಾರ್**  
**ಬೆಂಗಳೂರು**

# ಕೊಡಗು ಗೌಡ ವಿದ್ಯಾಸಂಘ (ರಿ.) ಮಡಿಕೇರಿ ಇವರ ವತಿಯಿಂದ ಅರೆಭಾಷಿಕರ ಹತ್ತು ಕುಟುಂಬ ಹದಿನೆಂಟು ಗೋತ್ರದ ಗೌಡ ವಿದ್ಯಾರ್ಥಿ ಪ್ರತಿಭೆಗಳಿಗೆ ಪುರಸ್ಕಾರ.

ದಿನಾಂಕ 3-10-1999ನೇ ಭಾನುವಾರ ದಿವಸ ಮಡಿಕೇರಿಯ ವಿದ್ಯಾಸಂಘದ ಆವರಣದಲ್ಲಿ ವರ್ಣರಂಜಿತ ಸರಳ ಸಮಾರಂಭವು ಹತ್ತು ಕುಟುಂಬ ಹದಿನೆಂಟು ಗೋತ್ರಕ್ಕೆ ಸೇರಿದ ಗೌಡ ಪ್ರತಿಭೆಗಳಿಗೆ ಪ್ರತಿ ವರ್ಷ ಕೊಡಲ್ಪಡುವಂತೆ ಈ ವರ್ಷವು ಸಂಘದ ಅಧ್ಯಕ್ಷರಾದ ಶ್ರೀ ಕುಯ್ಯಮುಡಿ ಪೂರ್ಣಯ್ಯನವರ ಅಧ್ಯಕ್ಷತೆಯಲ್ಲಿ ನಡೆಯಿತು. ಸಭೆಯಲ್ಲಿ ದಾನಿಗಳು ಮತ್ತು ಪ್ರತಿಭಾವಂತರ ಪೋಷಕರು, ಪ್ರತಿಭೆಗಳು, ವಿದ್ಯಾಸಂಘದ ನಿರ್ದೇಶಕರು, ಅಕಾಡೆಮಿಯ ನಿರ್ದೇಶಕರು ಮತ್ತು ಮಹಿಳಾ ಒಕ್ಕೂಟದ ನಿರ್ದೇಶಕರು ಹಾಗೂ ಸುಮಾರು 100ಕ್ಕೂ ಹೆಚ್ಚು ಗೌಡ ಬಾಂಧವರು ನೆರೆದಿದ್ದರು. ಮುಖ್ಯ ಅತಿಥಿಗಳಾಗಿ ನಿಧಿ ದಾನಿಗಳ ಪೈಕಿ ಶ್ರೀ ಕುಂಭಗೌಡನ ಪ್ರಭಾಕರ ಮತ್ತು ಕೊಲ್ಯದ ರಾಮಪ್ಪನವರು ಉಪಸ್ಥಿತರಿದ್ದರು. ಸಭೆಯಲ್ಲಿ ಸಂಸ್ಕೃತಿಕ ಅಕಾಡೆಮಿ ಅಧ್ಯಕ್ಷ ತುಂತಜೆ ಗಣೇಶ್, ಉಪಾಧ್ಯಕ್ಷ ಗುಡ್ಡೆಮನೆ ರಮೇಶ್, ಪ್ರಧಾನ ಕಾರ್ಯದರ್ಶಿ ಕೋಡಿ ಚಂದ್ರಶೇಖರ್, ನಿರ್ದೇಶಕರಾದ ಹುದೇರಿ ನಾಗೇಶ್, ಕೊಂಪುಳಿ ಗಣೇಶ್ ಹಾಗೂ ಅನೇಕ ನಿರ್ದೇಶಕರು ಹಾಜರಿದ್ದರು.

ಪ್ರತಿಭಾ ಕಾರ್ಯಕ್ರಮವು ಕುಮಾರಿ ಕೆದಂಬಾಡಿ ಕೃತಿಕಾ ಕಿಶೋರ್‌ಕುಮಾರ್ ಮತ್ತು ಗುತ್ತಿ ಮುಂಡನ ಶ್ರದ್ಧಾ ಪೂಣಚ್ಚನವರ ಪ್ರಾರ್ಥನೆಯೊಂದಿಗೆ ಪ್ರಾರಂಭವಾಯ್ತು. ಸೇರಿದ ಸರ್ವರನ್ನು ವಿದ್ಯಾ ಸಂಘದ ನಿರ್ದೇಶಕರಾದ ಸೂರ್ತಲೆ ಸೋಮಣ್ಣನವರು ಸ್ವಾಗತಿಸಿದರು. ವೇತನ ನಿಧಿ ನಡೆದು ಬಂದ ವಿಚಾರವನ್ನು ಪ್ರಧಾನ ಕಾರ್ಯದರ್ಶಿ ಕೊಳುಮುಡಿಯನ ಅನಂತ್‌ಕುಮಾರ್‌ರವರು ವಿವರಿಸಿದರಲ್ಲದೆ 104 ದಾನಿಗಳ ಹೆಸರನ್ನು ಓದಿ ಸಭೆಗೆ ತಿಳಿಸಿದರು. ಪ್ರತಿಭಾ ಪುರಸ್ಕಾರದ ನಗದು ಹಣವನ್ನು ಮತ್ತು ಧೃಡಿಕರಣ ಪತ್ರವನ್ನು ಮುಖ್ಯ ಅತಿಥಿಗಳಾದ ಕುಂಭಗೌಡನ ಪ್ರಭಾಕರನವರು 7ನೇ ತರಗತಿ ಮತ್ತು 10ನೇ ತರಗತಿಯ ಪ್ರತಿಭಾವಂತರಿಗೂ, ಪದವಿ ಪೂರ್ವ (PUC) ಪ್ರತಿಭೆಗಳಿಗೆ ಕೊಲ್ಯದ ರಾಮಪ್ಪನವರು ಮತ್ತು ಡಿಗ್ರಿ ಪ್ರತಿಭೆಗಳಿಗೆ ಅಧ್ಯಕ್ಷರಾದ ಕುಯ್ಯಮಡಿ, ಪೂರ್ಣಯ್ಯನವರು ವಿತರಿಸಿದರು. ನಂತರಕೋಳು ಮುಡಿಯನ ಅನಂತ್‌ಕುಮಾರ್‌ನವರು ನೆರೆದವರಿಗೆ ವಂದನೆ ಗೈದರು.

## 1998-99ನೇ ಸಾಲಿನ 7ನೇ ತರಗತಿಯ ಗೌಡ ಪ್ರತಿಭೆಗಳು

| | ಗರಿಷ್ಟ/ಲಭಿಸಿದ್ದು | ಶೇಕಡವಾರು | ಬಹುಮಾನ | ಮೊತ್ತ |
|---|---|---|---|---|
| 1. ಪೂಜಾರೀರ ಬೆಳ್ಯಪ್ಪ, ಪೂರ್ಣಿಮಾ | 600/586 | 97.66% | I | 1000/- |
| 2. ಕಟ್ಟೆಮನೆ, ಪ್ರಭಾಕರ, ಶರತ್ | 600/582 | 97.00% | II | 800/- |
| 3. ಕೆದಂಬಾಡಿ, ಕಿಶೋರ್ ಕುಮಾರ್, ಕೃತಿಕಾ | 600/579 | 96.50% | III | 700/- |
| 4. ಬೆಳ್ಯನ, ಆನಂದ, ನಿರ್ಮಿತ್ | 600/563 | 93.83% | IV | 600/- |
| 5. ಗುತ್ತಿಮುಂಡನ, ಪೂಣಚ್ಚ, ಶ್ರದ್ಧಾ | 600/563 | 93.83% | IV | 600/- |
| 6. ಕಡ್ಯದ ಭೀಮಯ್ಯ, ರಕ್ಷಿತ್ | 600/563 | 93.83% | IV | 600/- |

## 1998-99ನೇ ಸಾಲಿನ S.S.L.Cಯ ಗೌಡ ಪ್ರತಿಭೆಗಳು

| | | | | |
|---|---|---|---|---|
| 1. ಮೂಲೆಮನೆ ತಿಮ್ಮಪ್ಪ, ಜಯಶ್ರೀ | 625/554 | 88.64% | I | 1000/- |
| 2. ಅಂಚೆಮನೆ ಗಣೇಶ, ಯತೀನ್ | 625/554 | 88.64% | II | 1000/- |
| 3. ಗುಡ್ಡನ ನಾಣಯ್ಯ, ಸೌಮ್ಯ | 625/540 | 86.40% | III | 800/- |
| 4. ಅಚ್ಚಲ್ಪಾಡಿ ಈರಪ್ಪ, ವಿಶಾಲ್ | 625/535 | 85.60% | IV | 700/- |
| 5. ಪಾಡಿಚೆಟ್ಟೀರ ಉತ್ತಪ್ಪ, ವರ್ಷಾ | 625/534 | 85.44% | V | 600/- |

## 1998-99ನೇ ಸಾಲಿನ ದ್ವಿತೀಯ P.U.C ಯ ಗೌಡ ಪ್ರತಿಭೆಗಳು

| | | | | |
|---|---|---|---|---|
| 1. ಪರ್ಲಕೋಟಿ ಜನಾರ್ಧನ, ದೀಪ್ತಿ | 600/494 | 82.33% | I | 1000/- |
| 2. ಪರಿವಾರ ಅಪ್ಪಾಜಿ ಪ್ರತಿಭಾ | 600/492 | 82.00% | II | 1000/- |
| 3. ಮುಕ್ಕಾಟಿ ಪಳಂಗಪ್ಪ, ಸಬಿತ | 600/481 | 80.16% | III | 800/- |
| 4. ಮೂಲೆ ಮನೆ ತಿಮ್ಮಪ್ಪ, ಕಾವ್ಯ | 600/477 | 79.50% | IV | 700/- |
| 5. ಬೈಮನ ರಾಮಯ್ಯ, ಪ್ರೀತು | 600/442 | 73.66% | V | 600/- |

## 1998-99ನೇ ಸಾಲಿನ ಅಂತಿಮ ಡಿಗ್ರಿಯ ಗೌಡ ಪ್ರತಿಭೆಗಳು

| | | ಗರಿಷ್ಠ/ಲಭಿಸಿದ್ದು | ಶೇಕಡವಾರು | ಬಹುಮಾನ | ಮೊತ್ತ |
|---|---|---|---|---|---|
| 1. | ಸಬ್ಬಂಡ್ರ ಕುಶಾಲಪ್ಪ, ಶೈಲಜ B.A. | 1500/978 | 65.2% | I | 1500/- |
| 2. | ಅಣ್ಣೆಚ್ಚಿ ಬಬಿತ, ಗಣೇಶ B.B.M | 3200/1920 | 60.% | II | 1300/- |
| 3. | ಉದಿಯನ ಸುಮಿತ್ರ, ದೇವಯ್ಯ B.A | 1500/877 | 58.46% | III | 1100/- |
| 4. | ಬಿಟ್ಟೀರ ವೈನಿ, ರಾಮಯ್ಯ B.A. | 1500/810 | 54% | IV | 900/- |
| 5. | ಕುಯ್ಯಮುಡಿ ಶಿವಣ್ಣ, ಕುಸುಮ B.Com., | 2000/1024 | 51.20% | V | 800/- |

ವಿ. ಸೂ. : ಪ್ರತಿಭಾ ಸ್ವೀಕಾರಕ್ಕೆ ಹತ್ತು ಕುಟುಂಬ ಹದಿನೆಂಟು ಗೋತ್ರದ ಅರೆಭಾಷಿಕರಿಗೆ ಮಾತ್ರ ನೀಡಲಾಗುವುದು. ವೇತನಕ್ಕೆ ಅರ್ಜಿಸಲ್ಲಿಸುವಾಗ ತಮ್ಮ ತಮ್ಮ ಮನೆಯ ಹೆಸರನ್ನು ತಪ್ಪದೆ ತಿಳಿಸುವುದು ಮುಖ್ಯ. ಕಾರಣ, ಕೆ. ಬಿ. ಬಸಪ್ಪ, ಬಬಿತ ಇವರು PUCಯಲ್ಲಿ 600ಕ್ಕೆ 544, 90.66% ಗಳಿಸಿ ಪ್ರಥಮ ಸ್ಥಾನದಲ್ಲಿದ್ದರು ಸಹ ಮನೆ ಹೆಸರು ನೀಡದ್ದರಿಂದ ಪುರಸ್ಕಾರವು ತಿರಸ್ಕಾರವಾಗಿರುವುದು ಖೇದದ ಸಂಗತಿ.

ಇನ್ನು ಮುಂದಕ್ಕಾದರು ಮೊದಲ ಹತ್ತು ಪ್ರತಿಭೆಗಳಿಗೆ ಪುರಸ್ಕಾರ ನೀಡುವುದು ಶ್ರೇಯೋಭಿವೃದ್ಧಿ ದೃಷ್ಟಿಯಿಂದ ಉತ್ತಮವೆಂದು ಸಂಗಾತಿ ಅನಿಸಿಕೆ.

ವರದಿ : ಪಟ್ಟಡ ಪ್ರಭಾಕರ

## ನಿವೃತ್ತ ಏರ್‌ಫೋರ್ಸ್ ಜನತೆಯಿಂದ ವರ್ಣರಂಜಿತ ಸಂಘಟನೆ

ದಿನಾಂಕ 10-10-1999ನೇ ಭಾನುವಾರ ದಿನದಂದು ಮೈಸೂರು ಜಿಲ್ಲೆಯಲ್ಲಿ ವಾಸವಾಗಿರುವ ನಿವೃತ್ತ ಭಾರತೀಯ ವಾಯುದಳದವರಿಂದ ವರ್ಣರಂಜಿತವಾದ ಕಾರ್ಯಕ್ರಮವು ಮೈಸೂರು ನಗರದಲ್ಲಿರುವ ಹೋಟೆಲ್ ರಮಣಶ್ರೀಯಲ್ಲಿ ವಿಜೃಂಬಣೆಯಿಂದ ನಡೆಯಿತು.

ಭಾರತೀಯ ವಾಯುದಳದ ನಿವೃತ್ತ ರ್‍ಯಾಂಕರ್ಸ್ ಮತ್ತು ಅವರ ಸಂಸಾರಸ್ತರಿಂದ ಸಭಾಂಗಣವು ಸುಮಾರು 150 ಮಂದಿಯಿಂದ ತುಂಬಿತ್ತು. ಬೆಳಿಗ್ಗೆ 10-30ಕ್ಕೆ ಆಟೋಟಗಳಿಂದ ಪ್ರಾರಂಭವಾದ ಕಾರ್ಯಕ್ರಮವು ಮೈಸೂರು ನಗರದಲ್ಲಿರುವ ಇಂಡಿಯನ್ ಏರ್‌ಫೋರ್ಸ್ ಸೆಲೆಕ್ಷನ್ ಕೇಂದ್ರದ ಮುಖ್ಯಸ್ಥರಾದ ಗ್ರೂಪ್ ಕ್ಯಾಪ್ಟನ್ ಜುನೇಜಾನವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಮೊದಲಿಗೆ ಕಾರ್ಗಿಲ್ ಯುದ್ಧದಲ್ಲಿ ನಿಧನರಾದ ಮತ್ತು ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ತೊಂದರೆಗೊಳಗಾದವರಿಗೆ 2ನಿಮಿಷಗಳ ಮೌನವ್ರತ ಆಚರಿಸಿದರು. ಮಹಿಳೆಯರಿಗೆ ಮತ್ತು ಮಕ್ಕಳಿಗೆ ಬೋಟ್ಟು ಹಚ್ಚುವುದು, ಕೇಕ್ ತಿನ್ನುವುದು, ಚಾಕ್‌ಲೇಟ್ ತಿನ್ನುವುದುಸಂಸಾರಸ್ಥರಿಗೆ ಅಂತ್ಯಾಕ್ಷರಿ ಕಾರ್ಯಕ್ರಮವು ಇದ್ದವು. ನಿವೃತ್ತರಾಗಿ ಈಗ ಹಾಲಿ ಮೈಸೂರು ನಗರದ ಪೋಲೀಸ್ ಇಲಾಖೆಯಲ್ಲಿ ಸಬ್‌ಇನ್ಸ್‌ಪೆಕ್ಟರ್ ಆಗಿರುವ ಸಾರ್ಜೆಂಟ್ ಪ್ರಭಾಕರ್ ಶಿಂಧೆಯವರು ಬಹುಮಾನ ವಿತರಣೆ ಮಾಡಿದರು. ಸಭೆಯಲ್ಲಿ ನಿವೃತ್ತ ಸಾರ್ಜೆಂಟ್ ಮತ್ತು ಕೊಡಗು ಸಂಗಾತಿ, ಪಾಕ್ಷಿಕ ಪತ್ರಿಕೆಯ ಸಂಪಾದಕರಾದ ಶ್ರೀ ಪಟ್ಟದ ಪ್ರಭಾಕರ್‌ನವರು ಉಪಸ್ಥಿತರಿದ್ದರು. ಈ ಕಾರ್ಯಕ್ರಮದ ಯಶಸ್ಸಿಗೆ ಸಾರ್ಜೆಂಟ್ ಮಂಡೆಡ ಸುಬ್ರಮಣಿ, ವಕೀಲರು, ಉಪನ್ಯಾಸಕರು ಮತ್ತು ಸಾರ್ಜೆಂಟ್ ವಾಸು ರವರು ಕಾರಣಕರ್ತರಾಗಿದ್ದರು. ನಿರೂಪಣೆಯ ಉಸ್ತುವಾರಿಯನ್ನು ಸಾರ್ಜೆಂಟ್ಸ್‌ಗಳಾದ ವಾಸು, ರಾಮಕೃಷ್ಣ, ಶ್ರೀನಿವಾಸ್ ಮತ್ತು ರಾಮ ಚಂದ್ರನವರು ನಡೆಸಿ ಕೊಟ್ಟರು. ಶ್ರೀಮತಿ ವಸುಂದರಾರವರು ಸಭಿಕರಿಗೆ ವಂದಿಸಿದರು. ಏರ್‌ಫೋರ್ಸ್ ಫ್ರೆಂಡ್ಸ್ ಬಳಗದ ಅಂಕಿತದೊಂದಿಗೆ ಮುಂದೆ 2-1-2000ದಲ್ಲಿ ಜೊತೆಗೂಡುವ ಇರಾದೆಯನ್ನು ಸಹ ಸಭೆಯಲ್ಲಿ ವ್ಯಕ್ತಪಡಿಸಲಾಯಿತು. ನಂತರ ಆಸಕ್ತಿ ಇರುವ ನಿವೃತ್ತ ಏರ್‌ಫೋರ್ಸ್ ವ್ಯಕ್ತಿಗಳು ವಾಸುರವರನ್ನು (ದೂರವಾಣಿ.484484) ಸಂಪರ್ಕಿಸುವಂತೆ ತೀರ್ಮಾನಿಸಲಾಯಿತು.

ಸಂಗಾತಿ ವರದಿ.

## ತಿದ್ದುಪಡಿ

ಸಂಪುಟ 3, ಸಂಚಿಕೆ 18, ಪುಟ 5ರಲ್ಲಿ ನಮ್ಮ ಲೇಖಕರ ಪರಿಚಯ ಶ್ರೀಮತಿ ಬಿಟ್ಟೀರ ಚೋಂದಮ್ಮ, ಬೆಂಗಳೂರು, ಇವರು ಹುಟ್ಟಿದ್ದು ಬೆಂಗಳೂರಿನಲ್ಲಿ, ಓದಿದ್ದು ಬಿ. ಬಾಡಗ ಗ್ರಾಮ ಮತ್ತು ಅದೇ ಕಾಲೇಜಿನ ಪ್ರಾಂಶುಪಾಲರಾದ ವಸಂತನವರ ಸಹಕಾರ ಸಹ ಅಘೋರವಾದದು ಎಂದು. ಇದನ್ನು ಸಹೃದಯ ಓದುಗರು ಅಪೋಪವಾದದ್ದು ಎಂದು ಓದಿಕೊಳ್ಳುವುದು. ಮುದ್ರಾ ರಾಕ್ಷಸನ ಹಾವಳಿಗೆ ಸಂಗಾತಿಯು ವಿಷಾದಿಸುತ್ತದೆ.

ಸಂಪುಟ 3, ಸಂಚಿಕೆ 19, ಪುಟ 19ರಲ್ಲಿ ಕೊನೆ ಪ್ಯಾರಾ ಗೋತ್ರ ಯಾ ಬಳಿಗಳಲ್ಲಿ ಅರೆಭಾಷೆಗೌಡರು 18 ಗೋತ್ರಗಳು ಎಂಬುದಾಗಿ ಪ್ರಕಟಗೊಂಡಿದೆ. ಇದನ್ನು ಗೌಡರು 18 ಗೋತ್ರಗಳು ಎಂದು ಓದಿ ಕೊಳ್ಳುವುದು. ದೋಷಕ್ಕೆ ವಿಷಾದಿಸುತ್ತೇವೆ.

– ಸಂಪಾದಕ

## ವ್ಯಕ್ತಿ ಪರಿಚಯ : ಡಾ. ಪುರುಷೋತ್ತಮ ಬಿಳಿಮಲೆ

ಪ್ರಶ್ನೆ : ನಿಮ್ಮ ಹೆಸ್ರ್‌ನ ಮುಂದೆ 'ಬಿಳಿಮಲೆ'ತ ಉಟ್ಟು. ಬಿಳಿಮಲೆತ್ತೇಳ್‌ರೆ ಎಂತತ್ತೇಳಿ ಸ್ವಲ್ಪ ಹೇಳ್ರ್‌ಯಾ?

ಉತ್ತರ : ಇದ್ ಸುಳ್ಯ ತಾಲೋಕ್ ಕೂತ್ಕುಂಜ ಗ್ರಾಮದ ಬಿಳಿಮಲೆತ್ತೇಳ್ವ ಜಾಗ.

ಪ್ರ : ನೀವು ಈಗ ಎಲ್ಲಿ ಮತ್ತೆ ಯಾವ ಕೆಲ್ಸಲಿ ವಳರಿ?

ಉ : ನಾನ್ ಅಮೆರಿಕನ್ ಇನ್ಸ್‌ಟಿಟ್ಯೂಟ್ ಆಫ್ ಇಂಡಿಯನ್ ಸ್ಟಡೀಸ್ ಸಂಸ್ಥೆಲಿ ಉಪ ನಿರ್ದೇಶಕ ಇದ್ ಹರ್‍ಯಾಣ ರಾಜ್ಯಲಿವುಟ್ಟು.

ಪ್ರ : ನಿಮ್ಮ ಸಂಸಾರದವು?

ಉ : ಅವು 'ಹೊಸ ದೆಹಲಿ'ಲಿ ವಳೊ.

ಪ್ರ : ನಿಮ್ಮ ಹುಟ್ಟಿದ ತಾರೀಖ್ ಮತ್ತೆ ಊರ್‌ಯಾದ್?

ಉ : ನನ್ನ ಹುಟ್ಟಿದ ತಾರೀಖ್ 21-8-1955 ಊರ್ ಪಂಜ. ಸುಳ್ಯ ತಾಲೋಕ್.

ಪ್ರ : ನೀವು ಎಲ್ಲಿಗೆ ಮುಟ್ಟ ಓದಿಯೊಳರಿ? ಮತ್ತೆ ಯಾವ ದರ್ಜೆಲಿ ಪಾಸಾದ್?

ಉ : ನಾನ್ 1979ರ್ಲಿ ಕನ್ನಡ ವಿಸ್ಯಲಿ ಎಂ.ಎ.ನ ಮದ್ರಾಸ್ ವಿಶ್ವವಿದ್ಯಾಲಯಲಿ ಪ್ರಥಮ ದರ್ಜೆ, ಮೊದಲ್ನೆ ರ್‍ಯಾಂಕ್‌ಲಿ ಪಾಸಾದೆ. 1985ರ್ಲಿ 'ಜಾನಪದ' ವಿದ್ಯಲಿ ಮಂಗಳೂರು ವಿಶ್ವವಿದ್ಯಾಲಯಲಿ ಪಿ.ಹೆಚ್.ಡಿ. ಮಾಡಿ ಡಾಕ್ಟರೇಟ್ ಪಡ್ಕಂಡೆ.

ಪ್ರ : ನಿಮ್ಮ ವಿದ್ಯಾ ಮಟ್ಟ ನೋಡ್ರೆ ನಿಮಿಗೆ ಕೆಲವು ಭಾಷೆ ಗೊತ್ತಿರ್ದಲ. ಅವು.....?

ಉ : ಹೌದು ನಂಗೆ ಅರೆಭಾಷೆ, ತುಳು, ಕನ್ನಡ, ಇಂಗ್ಲೀಷ್, ತಮಿಳ್, ಮಲಯಾಳ ಮತ್ತೆ ಹಿಂದಿ ಭಾಷೆ ಮಾತಾಡ್ಕೆ ಬಂದದೆ.

ಪ್ರ : ನೀವು ಯಾವ್ಯಾವ ವಿಸ್ಯದ ವ್ಯಾಪ್ತಿಲಿ ತಜ್ಞರಾಗಿವಳರಿ?

ಉ : ನಾನ್ ಕನ್ನಡ ಸಾಹಿತ್ಯ, ವಿಮರ್ಶೆ, ಜಾನಪದ, ಸಂಸ್ಕೃತಿ ಅಧ್ಯಯನ, ಯಕ್ಷಗಾನ.

ಪ್ರ : ನಿಮ್ಮ ಅನುಭವ?

ಉ : ನಾನ್ 1979 ಜುಲೈಂದ 1984 ಜುಲೈವರೆಗೆ ಎನ್. ಎಂ. ಕಾಲೇಜ್ ಸುಳ್ಯ, 1984 ಜುಲೈಂದ 1992 ಆಗಸ್ಟ್‌ವರೆಗೆ ಮಂಗಳೂರು ವಿಶ್ವವಿದ್ಯಾಲಯಲಿ ಉಪನ್ಯಾಸಕನಾಗಿ ಮತ್ತೆ 1992 ಆಗಸ್ಟ್‌ದ 1998 ಜನವರಿವರೆಗೆ ಕನ್ನಡ ವಿಶ್ವ ವಿದ್ಯಾಲಯ ಹಂಪಿಲಿ ಪ್ರೊಫೆಸರ್ ಆಗಿದ್ದೆ.

ಪ್ರ : ನಿಮ್ಮ ಸಂಶೋಧನಾ ಅನುಭವ ಎಷ್ಟ್ ವರ್ಷ ನಡ್ತ್?

ಉ : ಸುಮಾರ್ 18 ವರ್ಷ

ಪ್ರ : ನಿಮ್ಮ ಉದ್ಯೋಗದ ಸ್ಥಾನಮಾನ?

ಉ : ನಾನ್ 'ಡೀನ್' (ಮುಖ್ಯಸ್ಥ) ಆಗಿ 1992ರ್‌ದ 1995ರವರೆಗೆ ಫಾಕಲ್ಟಿ ಆಫ್ ಫೈನ್ ಆರ್ಟ್ಸ್, 1992ರವರೆಗೆ ಇದರ್ಲೆ ಸಿಂಡಿಕೇಟ್ ಸದಸ್ಯ, 1993ರ್ಲಿ ರಿಜಿಸ್ಟ್ರಾರ್ 1993-1996ರವರೆಗೆ ನಿರ್ದೇಶಕ ಅಕಾಡೆಮಿ ವಿಂಗ್, 1992ರ್‌ದ 1998ರವರೆಗೆ 'ಜಾನಪದ' ಇಲಾಖೆ ಮುಖ್ಯಸ್ಥನಾಗಿ, ಕನ್ನಡ ವಿಶ್ವವಿದ್ಯಾಲಯ ಹಂಪಿಲಿದ್ದೆ. ಅಲ್ಲದೆ 1995-98ರವರೆಗೆ ಜಾನಪದ ಅಕಾಡೆಮಿಂದ್ ಸದಸ್ಯನಾಗಿ, ಜೊತೆಗೆ ರಾಜ್ಯ ವಯಸ್ಕರ ಶಿಕ್ಷಣ ಇಲಾಖೆಯ ಸದಸ್ಯನಾಗಿ, ರಾಜ್ಯ ಸರ್ಕಾರಂದ ನೇಮಕ ಗೊಂಡಿದ್ದೆ.

ಪ್ರ : ನೀವ್ ಬ್ಯಾರೆ ಯಾರಿಗಾದರ್ ಸಂಶೋಧನೆಗೆ ಮಾರ್ಗದರ್ಶಕರಾಗಿ ಇದ್ದರಿಯಾ?

ಉ : ಹೌದು ಸ್ನಾತಕೋತ್ತರ ಪದವಿ ತತ್ವಶಾಸ್ತ್ರ 8 ವಿದ್ಯಾರ್ಥಿಗ, ಅಲ್ಲದೆ ಪಿ.ಹೆಚ್.ಡಿ. ವಿಭಾಗದ 6 ವಿದ್ಯಾರ್ಥಿಗಳಿಗೆ ಮಂಗಳೂರು ಮತ್ತೆ ಕನ್ನಡ ವಿಶ್ವವಿದ್ಯಾಲಯಲಿ ಮಾರ್ಗದರ್ಶಕನಾಗಿದ್ದೆ.

ಪ್ರ : ನೀವು ಯಾವುದಾದರ್ ಪುಸ್ತಕ ಬರ್ದ್ ಪ್ರಕಟಿಸಿಯೊಳರಿಯಾ? ಯಾವುದ್? ಭಾಷೆ?

ಉ : ಹೌದು ಕನ್ನಡ ಬಾಷೆಲಿ ಒಟ್ಟು 12 ಪುಸ್ತಕ ಬರ್ದ್ ಪ್ರಕಟಿಸಿದ್ದ್. ಅವ್ 1985ರ್ಲಿ ಮೆಕಂಜಿ ಕೈಫಿಯತ್ತುಗಳು ಒಬ್ಬ ಮಾನ್ಯನ ಜೀವನ ಚರಿತ್ರೆ ಮತ್ತೆ ಕೆಲ್ಸಗ, 1986ರ್ಲಿ ಲಿಂಗರಾಜನ ಹುಕುಂನಾಮೆ 'ಸ್ಥಳೀಯ ರಾಜನ ಆಳ್ವಿಕೆ ಬಗ್ಗೆ, 1988ರ್ಲಿ ಕಂಬುಲ, ಮಾನವ ಸಂಪನ್ಮೂಲದ ಪ್ರಾಣಿ 'ಎಮ್ಮೆ' ಜಾತಿಗೆ ಸಂಬಂಧಿಸಿದ್ದ್, 1988ರ್ಲಿ ದಲಿತ ಜಗತ್ತು ದಕ್ಷಿಣ ಕನ್ನಡಲಿ ಅಸ್ಪಶ್ಯತೆ ಬಗ್ಗೆ ಟೀಕೆ, 1989ರ್ಲಿ ಬಂಡಾಯ ದಲಿತ ಸಾಹಿತ್ಯ ಸಾಹಿತ್ಯದ ಬಗ್ಗೆ ಟೀಕೆ, 1990ರ್ಲಿ ಕರಾವಳಿ ಜನಪದ ಕರಾವಳಿ ಜನರ ಸಂಸ್ಕೃತಿ, ಜಾನಪದ ಕಲೆಗೆ ಸಂಬಂಧಿಸಿದ್ದ್, 1992ರ್ಲಿ ಶಿಷ್ಟ ಪರಿಶಿಷ್ಟ, ನವೀನ ಕನ್ನಡ ಸಾಹಿತ್ಯದ ಬಗ್ಗೆ, 1993ರಲ್ಲಿ 'ಕೊರಗರು' ಕೊರಗ ಜನಾಂಗದ ಬಗ್ಗೆ, 1993ರ್ಲಿ ಕೋಮುವಾದ ಮತ್ತು ಜನಸಂಸ್ಕೃತಿ ಜಾತಿ ಸಂಘರ್ಷದ ಮ್ಯಾಲೆ, 1995ರ್ಲಿ ಹಂಪಿ ಜಾನಪದ ಹಂಪೆಯ ಜನ ಸಂಸ್ಕೃತಿ ಬಗ್ಗೆ 1997ರ್ಲಿ ಕೂಡುಕಟ್ಟು ಜಾನಪದದ ಸುಮಾರ್ 15 ಸಂಶೋಧನೆಗಳ ಬಗ್ಗೆ.

ಪ್ರ : ಇದಲ್ಲದೆ ಪುಸ್ತಕಗಳ ಸಂಪಾದಕರಾಗಿ ಎಷ್ಟ್ ಪುಸ್ತಕ ಮಾಡಿಯೊಳರಿ? ಯಾವುದ್? ಯಾಗ?

ಉ : ಸುಮಾರ್ 9 ಪುಸ್ತಕಗ, 1985ರ್ಲಿ ಕನ್ನಡ ಭಾಷಾ ಪಠ್ಯ ಪುಸ್ತಕಗಳು, 1986ರ್ಲಿ 'ಲೋಹಿಯಾವಾದ ಕೆಲವು ಟಿಪ್ಪಣಿಗಳು, 1988ರ್ಲಿ ದೇವರು, ದೆವ್ವ, ವಿಜ್ಞಾನ, 1989ರ್ಲಿ 5 ಯಕ್ಷಗಾನ ಪ್ರಸಂಗಗಳು, 1990ರ್ಲಿ ಅಕ್ಷರ ವಿಮೋಚನೆ, 1992ರ್ಲಿ ಪರ್‌ಸೆಪ್ಟಿವ್ಸ್ ಆನ್ ದಕ್ಷಿಣ ಕನ್ನಡ ಮತ್ತು ಕೊಡಗು, 1992ರ್ಲಿ ವಿಚಾರ ಸಾಹಿತ್ಯ, 1995ರ್ಲಿ 'ಸಿರಿ', 1997ರ್ಲಿ ಜಾನಪದ ಕೈಪಿಡಿ.

ಪ್ರ : ನೀವ್ ನಿಯತ ಕಾಲಿಕಗಳ ಸಂಪಾದಕರಾಗಿ ದುಡ್ಡೊಳರಿಯಾ?

ಉ : ಹೌದು 3 ನಿಯತಕಾಲಿಕಗಳಿಗೆ ಸಂಪಾದಕರಾಗಿ ದುಡ್ಡೊಳೆ. 1986ರ್‌ಂದ 1988ರವರೆಗೆ ರಂಗಪಾತ್ರ, 1989ರ್ಲಿ ಜನಪದ ಗಂಗೋತ್ರಿ, 1988-89ರ್ಲಿ ಕರ್ನಾಟಕ ಫೋಕ್‌ಲೋರ್ ನ್ಯೂಸ್ ಲೆಟರ್.

ಪ್ರ : ನೀವ್ ಸಂಶೋಧನೆ ಬಗ್ಗೆ ಏನಾದರ್ ಪ್ರಕಟಣೆ ಮಾಡಿಯೊಳರಿಯಾ?

ಉ : ಹೌದು 18 ಪೇಪರ್ ಮಾಡೊಳೆ. 1985, ಕರಾವಳಿ ಜನಪದ ಕಾವ್ಯದ ತಾತ್ವಿಕ ಹಿನ್ನೆಲೆ. 1987 ಮಾಸ್ತಿಕತೆಗಳಲ್ಲಿ ಜನಪದ ಪ್ರಜ್ಞೆ, 1988 ಗೌಡ ಜನಾಂಗದ ಮೊದುವೆಯ ಸಂಕೇತಿಕತೆ, 1988 ಸಿದ್ಧ ವೇಷ, 1988 ಅತಿಥೇಯ ಸ್ವರೂಪ, ಲಕ್ಷಣ, ಪ್ರಕಾರಗಳು, ಸಾಧನೆ, 1988 ಜೋಗಿಗಳು, ಪರಿಚಯ, 1988 ಕಂಬುಲ ಮಾನವಿಕ ಕರ್ನಾಟಕ, 1988 ದಕ್ಷಿಣ ಕನ್ನಡದಲ್ಲಿ ಜಾತಿಗಳ ಅಧ್ಯಯನ ಹೆಜ್ಜೆ ಗುರುತು, 1989 ಜಾನಪದ ಕತೆಗಳ ಪಠಾಂತರಗಳು ಸಂದರ್ಭ ಮತ್ತು ಅರ್ಥ, 1990 ಜನಪದದಲ್ಲಿ ಲೋಕ ದೃಷ್ಟಿ ಸಾಧನೆ, 1991 ಪಳೆಯುಳಿಕೆಗಳ ಸಾಕ್ಷ್ಯ ಚಿತ್ರ, 1991 ಫ್ಯೂನರಲ್ ರೈಟ್ಸ್ ಆಫ್ ದಿ ಕೂರ್ಗ್, 1992 ಫೋಕ್ ಲೋರ್ ಅಂಡ್ ಲಿಟರೇಚರ್ ಇನ್ ಇಂಡಿಯ, 1994 ಫೋಕ್ ಡಿಸ್‌ಕೋರ್ಸಸ್, 1995 ಮಹಿಳಾ ಜಾನಪದ, 1996 ಕುಮಾರ ರಾಮ ಅಂಡ್ ಮೆಡೀವಲ್ ಕರ್ನಾಟಕ, 1997 ರೀ ಡೂಪ್ಲಿಕೇಶನ್ ಯಾಸ್ ಎ ಟ್ರಕ್ಕಿಂಗ್ ಸ್ಟ್ರೇಟಜಿ ಇನ್ ನ್ಯಾಷನಲ್ ಸ್ಟ್ರಗಲ್, ಹೊಯ್ಸಳ, 1998 ಫೋಕ್ ಲೋರ್ ಮೆಥಡಾಲಜಿ.

ಪ್ರ : ನೀವ್ ಸಂಶೋಧನೆಗೆ ತಕ್ಕಂಡ ಯೋಜನಾ ವಿಸ್ಯ ಯಾಪುದೆಲ್ಲಾ?

ಉ : 1992ಕಲೆಕ್ಸನ್ ಆಫ್ ತುಳು ಫೋಕ್ ಟೇಲ್ಸ್, 1993 ಸಂಶೋಧನಾ ಕರ್ನಾಟಕ, 1994 ಹೊಸಪೇಟೆ ತಾಲೋಕು ದರ್ಶನ, 1996 ಹಂಪಿ ಜಾನಪದ, 1996 ಎನ್‌ಸೈಕ್ಲೋಪೇಡಿಯಾ ಆಫ್ ಫೋಕ್ ಡೇಯಿಟೇಸ್ ಆಫ್ ಕರ್ನಾಟಕ, 1997 ಕುಮಾರ ರಾಮ ಇನ್ ಕನ್ನಡ ಕಲ್ಚರ್, 1997 ಗಾಡ್ಡೆಸ್ ಹುಲಿಗೆಮ್ಮ, 1996 ಕರ್ನಾಟಕ ಜಾನಪದ.

ಪ್ರ : ನಿಮ್ಮ ಈ ಮಹಾತ್ಸಾಧನೆಗೆ ಸಂದ ಗೌರವ? ಯಾವು ಪ್ರಶಸ್ತಿಗೆ? ಯಾವುದಕ್ಕೆ?

ಉ : ನಂಗೆ ಆರು ಪ್ರಶಸ್ತಿಗ ಬಂದೊಳೊ, 1992ರ್ಲಿ ಡಾ. ಗೂಡ್ ಮಿ ಚಂದ್ರಶೇಖರ ಐತಾಳ ಪ್ರಶಸ್ತಿ 'ಕರಾವಳಿ ಜಾನಪದ'ಕ್ಕೆ, 1993ರ್ಲಿ ಬಿ. ಹೆಚ್. ಶ್ರೀ ಪ್ರಶಸ್ತಿ ಶಿಷ್ಟ ಪರಿಶಿಷ್ಟಕ್ಕೆ, 1994ರ್ಲಿ ಮಲ್ಲಿಕಾರ್ಜುನ ಮನ್ಸೂರ್ ಪ್ರಶಸ್ತಿ, ಶಿಷ್ಟ ಪರಿಶಿಷ್ಟಕ್ಕೆ, 1994ರ್ಲಿ ಆರ್ಯಭಟ್ಟ ಪ್ರಶಸ್ತಿ ಶಿಷ್ಟ ಪರಿಶಿಷ್ಟಕ್ಕೆ, 1998ರ್ಲಿ ಎಂ. ಆರ್. ಸಾರಂಗ ಮಟ ಪ್ರಶಸ್ತಿ ಕೊಡುಕಟ್ಟುಗೆ, 1998ರ್ಲಿ ಕೆ. ಎಸ್. ಹಲಿದಾಸ ಭಟ್ ಪ್ರಶಸ್ತಿ ಕೊಡು ಕಟ್ಟುಗೆ.

ಪ್ರ : ನಿಮ್ಮ ಇಷ್ಟೆಲ್ಲಾ ಸಾಧನೆಗಳ ಜೊತೆಗೆ ನೀವ್ ವಿದೇಶಗಳಿಗೆ ಪ್ರಯಾಣಬೆಳ್ಸಿರೊಕಲ್ಲ?

ಉ : ಹೌದು, 1994ಆಗಸ್ಟ್‌ಲಿ ಯಕ್ಷಗಾನ ಗುಂಪ್‌ನ ನಾಯಕನಾಗಿ ಜಪಾನ್‌ಗೆ ಭೇಟಿ ನೀಡಿ ಒಂದು ತಿಂಗ ಇದ್ದೆ, 1998 ಡಿಸೆಂಬರ್‌ಲಿ 'ಮಕ್ಕಳ ಆಟಗಳು'ತ್ತೇಳ್ವ ಅಂತರಾಷ್ಟ್ರೀಯ ವಿಚಾರ ಸಂಕೀರ್ಣಲಿ ಪ್ರಬಂಧ ಮಾಡಿಸಿಕೆ ಜಪಾನ್‌ನ ಟೋಕಿಯೋಕ್ಕೆ ಹೋಗಿದ್ದೆ, 1999ಮೇಲಿ ಇಸ್ರೇಲ್ ದೇಶದ ಜೆರುಸಲೇಮ್‌ಗೆ ಹೋಗಿದ್ದ್. ಭಾರತೀಯ ಮೌಖಿಕ ಸಂಕೀರ್ಣಲಿ ಭಾಗವಹಿಸಿ ಪ್ರಬಂಧ ಮಂಡಿಸಿದ್ದೆ.

ಪ್ರ : ಇಷ್ಟೆಲ್ಲಾ ಅಧ್ಯಯನಕ್ಕೆ ನೀವ್ ಆಯಾಯ ವಿಸ್ಯಗಳ ಬಗ್ಗೆ ಗೋಷ್ಠಿ ಏರ್ಪಾಡ್ ಮಾಡಿದ್ದರಿಯಾ?

ಉ : ಹೌದು ಮಾಡಿದ್ದೆ, 1992ರ್ಲಿ ನಾಲ್ಕು ದಿನ ಫೋಕ್ ಆರ್ಟ್ ಆಫ್ ಕರ್ನಾಟಕ, 1993ರ್ಲಿ ನಾಲ್ಕು ದಿ ಫೋಕ್ ಡೇಯಿಟೇಸ್ ಆಫ್ ಕರ್ನಾಟಕ, 1994ರ್ಲಿ ಐದು ದಿನ ಬಯಲಾಟ ಫರ್ ಪಾರ್ಮೇನ್ಸಸ್, 1994ರ್ಲಿ ಇಪ್ಪತ್ತೊಂದು ದಿನ ಫೋಕ್ ಲೋರಿಸ್ಟಿಕ್ಸ್‌ಗಳ ಬಗ್ಗೆ ಕನ್ನಡ ವಿಶ್ವವಿದ್ಯಾಲಯ ಹಂಪಿಲಿ, 1995ರ್ಲಿ ಮೂರು ದಿನ ಸಣ್ಣಾಟಾಸ್ ಆಫ್ ನಾರ್ತ್ ಕರ್ನಾಟಕ ಕಿತ್ತೂರ್‌ಲಿ, 1996ರ್ಲಿ ಎರಡು ದಿನ ಟ್ರಿಕ್‌ಸ್ಟರ್ ಹೀರೋಸ್ ಬಗ್ಗೆ ಉಡುಪಿಲಿ.

ಪ್ರ : ಇದೇ ವ್ಯಾಸಂಗಕ್ಕೆ ಸಂಬಂಧ ಪಟ್ಟಂಗೆ ಕಾರ್ಯಾಗಾರಗಳಿಗೆ ಬ್ಯಾರೆ ಕಡೆ ಹಾಜರಾಗಿದ್ದರಿಯಾ?

ಉ : ಹೌದು ಹಾಜರಾಗಿದ್ದೆ, 1987ರ್ಲಿ ಐದು ದಿನ ರೀಸರ್ಚ್ ಮೆಥಡೊಲಜಿ ಮಂಗಳೂರು, 1988-89ರ್ಲಿ ಎಂಭತ್ತೇಳು ದಿನ ವರ್ಕ್ ಷಾಪ್ ಆನ್ ಫೋಕ್ ಲಾರಿಸ್ಟಿಕ್ಸ್, ಹೈದರಬಾದ್, ಉಡುಪಿ, 1991ರ್ಲಿ ಏಳು ದಿನ ಇಂಟರ್ ನ್ಯಾಷನಲ್ ಫೋಕ್ ಫೆಸ್ಟಿವೆಲ್, ಬೆಂಗಳೂರು, 1992ರ್ಲಿ ಆರು ದಿನ ಯಕ್ಷಗಾನ ಕಾಸ್ಟ್ಯೂಮ್ಸ್ ಕಟೀಲ್, ಮಂಗಳೂರು. 1994ರ್ಲಿ ಆರು ದಿನ ಏಷ್ಯಾನ್ ಫೋಕ್ ಡ್ಯಾನ್ಸ್ ಟೋಕಿಯೊ, 1996ರ್ಲಿ ಮೂರು ದಿನ ವರ್ಕ್‌ಷಾಪ್ ಆನ್ ಟ್ರೈಬಲ್ ಸ್ಟಡೀಸ್, ಬೆಂಗಳೂರು, ರಿಸೋರ್ಸ್ ಪರ್ಸನ್ ಫಾರ್ ಇಲೆವನ್ ಒರಿಯಂಟೇಶನ್ ಕೋರ್ಸಸ್, ಮೈಸೂರು, ಮಂಗಳೂರು, ಕುವೆಂಪು ಮತ್ತು ಬೆಂಗಳೂರು ವಿಶ್ವವಿದ್ಯಾಲಯ.

ಪ್ರ : ಇದರ ಜೊತೆಗೆ ಎಷ್ಟ್ ಗೋಷ್ಠಿಗಳಿಗೆ ಯಾವ ಮಟ್ಟಲಿ ಹಾಜರಾಗೊಳರಿ?

ಉ : ರಾಜ್ಯಮಟ್ಟಲಿ ನಲವತ್ತು ಗೋಷ್ಠಿ, ರಾಷ್ಟ್ರಮಟ್ಟಲಿ ಒಂಭತ್ತು ಗೋಷ್ಠಿ, ಅಂತರಾಷ್ಟ್ರೀಯ ಮಟ್ಟಲಿ ಆರು ಗೋಷ್ಠಿ, ಜಪಾನ್‌ನ ಟೋಕಿಯೊಲಿ ಒಂದು ಗೋಷ್ಠಿ, ಇಸ್ರೇಲ್‌ನ ಜೆರುಸಲೇಮ್‌ಲಿ ಒಂದು ಗೋಷ್ಠಿ.

ಪ್ರ : ನಿಮ್ಮ ಇಷ್ಟೆಲ್ಲಾ ವಿದ್ಯಾಭ್ಯಾಸಗಳ ಜೊತೆಗೆ ಬ್ಯಾರೆ ಹವ್ಯಾಸಗಳು ಅಭಿರುಚಿ ಏನಾದರ್.....?

ಉ : ಛೆ! ಅದಿಲ್ಲದಿದ್ರೆ ನಮಿಗೆ ಜೀಪ್‌ನಲಿ ಕುಸಿ ಮತ್ತೆ ತಪಿಸಿಕ್ಕುದು ಹೆಂಗೆ. ನನ್ನ ಕೆಲ ಸಮ್ಮನ ಛಾಯಚಿತ್ರ ತೆಗ್ಯೊದು ಮತ್ತೆ ನಾನ್ ಸ್ವತ ತೆಂಕುತಿಟ್ಟು ಯಕ್ಷಗಾನಲಿ ಪಾತ್ರಧಾರಿಯಾಗೊಳೆ ಅಲ್ಲದೆ. ಸಮಾಜದ ಕೆಲವೊಂದು ಚಟುವಟಿಕೆಗಸ ಉಟ್ಟು.

ಪ್ರ : ನಿಮ್ಮ ಈ "ಒಂದು ಮೈಲು" ಉದ್ದ ಓದುಗಾರಿಕೆ ಮತ್ತೆ ಸಾಧನೆನ ಪಟ್ಟಿ ನೋಡ್ರೆ ಎಂತವಂಗು ಬೆರಗಾದು ನೀವ್ ಏನ್ ಹೇಳ್‌ರೆ?

ಉ : ಅದ್ ಸರಿ ಇರ್‌ದು. ಆದ್ರೆ ಒಬ್ಬ ಮೊನ್ನೆ ತನ್ನನ ಯಾವ ರೀತಿ ತೊಡ್‌ಗ್‌ಸಿಕಂಡ್ರೆ ಏನ್ ಮಾಡತ್ತ್‌ೇಳ್ವನ

ತಿಳ್ಕಣಕು. ಯಾರೇ ಆಗಲಿ ಅಂವ ಮನ್ಸ್ ಮಾಡಿ ತನ್ನ ಜೀವನಲಿ ಆರ್ಸಿಕ್‌ಣ್‌ವ ವಿಸ್ಯದ ಆಸಕ್ತಿ ಮ್ಯಾಲೆ ಪ್ರಯತ್ನದೊಟ್ಟಿಗೆ ಗುರಿ ಮುಟ್ಟಕ್. ಮನ್ಸ್ ಇದ್ದರೆ ಮಾರ್ಗ ಉಟ್ಟು.

ಪ್ರ : ಕೊಡಗು ಸಂಗಾತಿ ಬಗ್ಗೆ ನಿಮ್ಮ ಅಭಿಪ್ರಾಯ ಏನ್?

ಉ : ಇದ್ ನಿಜಕ್ಕೂ ಗೌಡ ಜನಾಂಗದ ಬೆಳ್‌ಕ್ ಚೆಲ್ಲುತ್ತಿರುವ ದೀಪ. ಈ ಪತ್ರಿಕೆನ ಪ್ರತಿಯೊಬ್ಬ ಜನಾಂಗ ಬಾಂಧವ ಪಡ್‌ಕಂಡ್ ಓದಕು. ಜೊತೆಗೆ ಪತ್ರಿಕೆನ ಬೆಳ್ಸ್‌ಕೆ ನಾವು ಎಲ್ಲಾ ರೀತ್ಯಾ ಸಹಕಾರ ನೀಡಕು. ಇಂದ್ ನಮ್ಮದೇ ಆದ ಸಂಗಾತಿನ ಓದ್‌ಕೆ ನಮಿಗೆಷ್ಟ್ ಹೆಮ್ಮೆತ್ತೇಳ್ದೊನ ಎಲ್ಲವೂ ಗ್ಯಾನ ಮಾಡೊಕು. ಇದರ್ನ ನಡ್ಸ್‌ತ್ತಿರುವ ಸಂಪಾದಕರ್‌ನ ಧೈರ್ಯ, ಸಾಹಸ ಮತ್ತೆ ಅಬಿಮಾನಕ್ಕೆ ಮೆಚ್ಚಕು. ಇಂದ್ ನಮ್ಮ ಜನಾಂಗದ ಪ್ರತಿಭೆಗಳಿಗೆ, ತಮ್ಮ ಪರಿಜ್ಞಾನ ವ್ಯಕ್ತ ಪಡ್ಸ್‌ವ ಅವಕಾಶನ ಸದುಪಯೋಗ ಮಾಡಿಕ್ಕಣ್‌ಕೆ ಈ ಸಂಗಾತಿ ಆಸರೆಯಾಗಿಟ್ಟು.

ಪ್ರ : ಜನಾಂಗಕ್ಕೆನಾದರ್ ನಿಮ್ಮ ಸಂದೇಶ ಉಟ್ಟಾ?

ಉ : ನಾನ್ ಸಂದೇಶ ನೀಡ್‌ವಷ್ಟ್ ಮಟ್ಟಕ್ಕೆ ತಲ್‌ಪಿತ್‌ಲೇ. ಆದ್ರು ನನ್ನ ವೈಯಕ್ತಿಕ ಸಾಧನೆ, ಇತರ ಪ್ರತಿಭಾವಂತರಿಗೆ ಆದರ್ಶ ಪ್ರಾಯವಾದರೆ ಅದೇ ನಂಗೆ ದೊಡ್ಡ ತೃಪ್ತಿ. ಯಾರೇ ನನ್ನ ಸಹಕಾರ, ಸಲಹೆ, ಮಾರ್ಗದರ್ಶನ ಬೇಕುತ್ತೇಳ್‌ರೆ ನಾನ್ ಸದಾಸಿದ್ಧನಾಗಿ ಒಳೆ. ಜನಾಂಗದ ಸ್ಫೂರ್ತಿಯೇ ನನ್ನ ಈ ಯಶಸ್ಸಿಗೆ ಕಾರಣ. ನಮ್ಮ ಜನಾಂಗ ರಾಷ್ಟ್ರ ಮಟ್ಟಲಿ ಗುರುತಿಸಕ್ಕಣ್‌ವ ಯಾವುದೇ ಕಾರ್ಯ ಯೋಜನೆನ ಈಗನ ಎಲ್ಲಾ ಸಂಘ ಸಂಸ್ಥೆ, ಸಮಾಜ, ಅಕಾಡೆಮಿ ಸೇರಿ ಹಮ್ಮಿಕ್ಕಣಕು.

ಸುಳ್ಯದ ಬಿಳಿಮಲೆಯ, ಪುರುಷ ಬಾಂಧವರು ಉತ್ತಮನಾದ ಶ್ರೀ ಪುರುಷೋತ್ತಮನವು, ತನ್ನ ಹೆಸ್ರ್‌ಗೆ ತಕ್ಕಂತೆ, ಅದ್ವಿತೀಯ ಸಾಧನೆ ಮಾಡಿಕ್ಕಂಡ್ ನಮ್ಮ ಜನಾಂಗನ ಬೆಟ್ಟದಷ್ಟು ಎತ್ತರಕ್ಕೆ ತಂದೊಳೊ. ಇವ್ರ ವ್ಯಾಸಂಗದ ಕ್ರಮನ ಒಮ್ಮೆ ಕಣ್ಣ್ ಹಾಯ್ಸಿರೆ ನಂಬ್‌ಕಾಕಿಲೆ. ಆದ್ರೂ ಒಬ್ಬ ಮೊನ್ಸ ತನ್ನನ್ನ ಯಾವ್ಯಾವ ಕ್ಷೇತ್ರಲಿ ಏಕಕಾಲಲಿ ತೊಡಗಿಸಿಕಂಡ್ ಜಯದ ಮೆಟ್ಲ್ ಹತ್ತಕ್‌ತ್ತೇಳ್ದೊಕೆ ಇವರ್ನ ಬುಟ್ರೆ ಬ್ಯಾರೆ ಉದಾರಣೆ ಯಾಕೆ? ಇವ್ ಇಂದ್ ಜನಾಂಗಕ್ಕೆ ಒಂದು ಆಸ್ತಿಯಾಗಿದ್ದ್, ವಿದ್ಯಾಕ್ಷೇತ್ರದ ಪ್ರೇರಣೆ ಶಕ್ತಿಯಾಗೊಳೊ. ಇವರ ಹಲವು ಪುಸ್ತಕಗ ಬಹಳ ಸ್ವಾರಸ್ಯಕರವಾಗಿದ್ದ್, ಜಾನಪದದ ತಿರ್‌ಳ್‌ನ ತೆಗ್ದ್, ಜೀವನದ ವಿವಿಧ ದೃಷ್ಟಿಕೋನಕ್ಕೆ ಸಂಬಂಧಿಸಿದ್ದ್. ಅಪಾರ ಜನಪ್ರಿಯ ಕಂಡ್‌ಟು. ಇವರ ಮಹತ್ತರ ಸಾಧನೆ ಜೊತೆಗೆ ಗೌಡ ಜನಾಂಗದ ಭಾಷೆ, ಸಂಸ್ಕೃತಿ, ಜೀವನಕ್ರಮ ಬಗ್ಗೆ ಸಂಶೋಧನೆ ನಡ್ಸಿ ಗ್ರಂಥ ಪ್ರಕಟಿಸಿಕೆ ಪ್ರಯತ್ನಿಸುವ ದಿಕ್ಕ್‌ನತ್ತ ಹೆಜ್ಜೆ ಹಾಕಿಕೆ ಗ್ಯಾನ ಬರ್ಸಿ, ಇವರ ಪ್ರಶಸ್ತಿಗಳು ಕೀರಿಟಕ್ಕೆ ಇನ್ನೊಂದು ಗರಿ ಸೇರಲಿತ್ತೇಳಿ ಹಾರೈಸಮೊ.

ಇವರ ತಂದೆ ಉತ್ತಮ ಕೃಷಿಕರಾದ ಬಿಳಿಮಲೆ ಶೇಷಪ್ಪ ಗೌಡರು, ಅವರ ತಂದೆ ರಾಮಣ್ಣಗೌಡರು, ಪುರುಷೋತ್ತಮ್ಮನವರ ತಾಯಿ ಗಿರಿಜಾ ಗುತ್ತಿಗಾರು ಗ್ರಾಮದ ಕಮಿಲ ಮನೆತನದವರು. ಇವರಿಗೆ ಇಬ್ಬರು ಸಹೋದರರು. ಒಬ್ಬಳು ಸಹೋದರಿ ಗುಲಾಬಿ ಸಾಹಿತಿ ಶ್ರೀನಿವಾಸ್ ಕಾರ್ಕಳ ಇವರ ಪತ್ನಿಯಾಗಿದ್ದಾರೆ. ಸಹೋದರ ಪದ್ಮನಾಭ ಉಪನ್ಯಾಸರಾಗಿ, ಪರಮೇಶ್ವರ ಬ್ಯಾಂಕ್‌ನಲ್ಲಿ ಉದ್ಯೋಗದಲ್ಲಿ ಇದ್ದಾರೆ. ಜನಾಂಗದ ಪ್ರಥಮ ಭಾಷೆ ಮತ್ತು ಸಂಸ್ಕೃತಿ ಬಗ್ಗೆ ಸಂಶೋಧನೆ ನಡೆಸಿ ಇನ್ನು ಎತ್ತರ ಎತ್ತರಕ್ಕೇರಲಿ ಎಂದು ಸಂಗಾತಿ ಹಾರೈಸಿದೆ.

**ಸಂದರ್ಶನ /ಲೇಖನ : ಗುಡ್ಡೆಮನೆ ರಮೇಶ್, ಮಡಿಕೇರಿ**

## ಹೂಟಗಳ್ಳಿ ಕೊಡಗು ಗೌಡ ಮಿತ್ರರ ಬಳಗದಿಂದ ಕೈಲ್ ಪೋಳ್ದ್ ಹಬ್ಬ

ದಿನಾಂಕ 10-10-1999 ಭಾನುವಾರ ಮೈಸೂರಿನಿಂದ ಹದಿನೈದು ಕಿ. ಮೀ ದೂರದಲ್ಲಿರುವ ಕಾವೇರಿ ತೀರದ ಬಲಮುರಿಯಲ್ಲಿ ಮೈಸೂರಿನ ಹೂಟಗಳ್ಳಿ ಕ್ಷೇತ್ರದ ವ್ಯಾಪ್ತಿಗೆ ಒಳಪಡುವ ಕೊಡಗು ಗೌಡ ಬಾಂಧವರು ಕೈಲ್ ಪೋಳ್ದ್‌ನ್ನು ಆಚರಿಸಿದರು. ಸುಮಾರು ನೂರರ ಆಸು ಪಾಸು ಗಂಡಸರು, ಮಹಿಳೆಯರು ಮತ್ತು ಮಕ್ಕಳು ಸೇರಿದ್ದರು. ಆಟೋಟಗಳ ನಂತರ ಸ್ವಪರಿಚಯದೊಂದಿಗೆ ಪ್ರಾರಂಭವಾದ ಸಭೆಯ ಅಧ್ಯಕ್ಷತೆಯನ್ನು ಮುಕ್ಕಾಟಿ ಉಲ್ಲಾಸ್‌ನವರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀಯುತ ಮೂಟೇರ ನಂಜುಂಡ ನಿವೃತ್ತ ಶಿಕ್ಷಕರು ನಂಜರಾಯ ಪಟ್ಟಣ ಇವರು ಆಗಮಿಸಿದ್ದರು.

ಅಧ್ಯಕ್ಷರಾದ ಉಲ್ಲಾಸ್‌ನವರು ಹತ್ತು ಕುಟುಂಬ ಹದಿನೆಂಟು ಗೋತ್ರದ ಗೌಡ ಬಾಂಧವರನ್ನು ಸ್ವಾಗತಿಸುತ್ತಾ ಕೊಡಗು ಗೌಡ ಮಿತ್ರರ ಬಳಗದ ಭವಿಷ್ಯದ ಬೆಳವಣಿಗೆಯನ್ನು ಮತ್ತು ಕೈಲ್ ಪೋಳ್ದ್‌ನ್ನು ಯಾವ ನಿಟ್ಟಿನಲ್ಲಿ ಆಚರಿಸಬೇಕೆಂಬುದರ ಬಗ್ಗೆ ಮಾತನಾಡಿದರು. ಮುಖ್ಯ ಅತಿಥಿಗಳು ಮಾತನಾಡುತ್ತಾ ಅರೆಭಾಷಿಕ ಗೌಡ ಯುವ ಜನಾಂಗವು ನಮ್ಮ ಜನಾಂಗದ ಬೆಳವಣಿಗೆಯಲ್ಲಿ ಆಧಾರ ಸ್ತಂಭದಂತಿರಬೇಕಲ್ಲದೆ, ಇಂತಹ ಸಂಘಟನೆಯಿಂದ ಬೇರೆ ಬೇರೆ ಕುಟುಂಬದಿಂದ ಬಂದ ನಮಗಳಲ್ಲಿ ಒಗ್ಗಟ್ಟು, ಐಕ್ಯತೆ, ಸಂಘಟನೆ ಸುಲಭ ಸಾಧ್ಯವೆಂದರು. ಕೊಡಗಿನ ಪದ್ಧತಿಯ ಊಟೋಪಚಾರವಿತ್ತು.

ಈ ಕಾರ್ಯಕ್ರಮದ ಯಶಸ್ವಿಗಾಗಿ ಪ್ರಯತ್ನಿಸಿ, ಸಹಕರಿಸಿದ ಶ್ರೀಮತಿ/ಶ್ರೀ ಮೂಟೇರ ನಂಜಪ್ಪ, ಶ್ರೀಮತಿ/ಶ್ರೀ ಚೆರಿಯಮನೆ ಉಮೇಶ್ ಮತ್ತು ಶ್ರೀಮತಿ/ಶ್ರೀ ಚಿಕ್ಕೊಡಿ ರಮೇಶ್ ಹಾಗೂ ಇತರರ ಸಹಕಾರವನ್ನು ನೆನೆಯಲಾಯಿತು.

**ವರದಿ : ಬೈನೆರವನ ಇಂದ್ರಕುಮಾರ್**

# ನಮ್ಮ ಲೇಖಕರ ಪರಿಚಯ



ಕುಲ್ಲಚನ ಕೆ. ಕಾರ್ಯಪ್ಪನವರು

ಕುಲ್ಲಚನ ಕಾರ್ಯಪ್ಪನವರು ಮಡಿಕೇರಿ ತಾಲೂಕು ಕುಂಬಳದಾಳು ಗ್ರಾಮದ ರೈತ ಕುಟುಂಬಕ್ಕೆ ಸೇರಿದ ಕುಲ್ಲಚನ ಕುಟ್ಟಪ್ಪ ಮತ್ತು ಪೊನ್ನಮ್ಮ ದಂಪತಿಗಳ ದ್ವಿತೀಯ ಪುತ್ರರಾಗಿ 1936ರಲ್ಲಿ ಜನಿಸಿದರು,

ಶ್ರೀಯುತರ ಪ್ರೈಮರಿ ವಿದ್ಯಾಭ್ಯಾಸವು ಕುಂಬಳದಾಳು ಶಾಲೆಯಲ್ಲಿಯೂ, ಮಿಡಲ್‌ಸ್ಕೂಲ್ ವಿದ್ಯಾಭ್ಯಾಸವು ಮೂರ್ನಾಡು ಶಾಲೆಯಲ್ಲಿಯೂ, ಪ್ರೌಢವಿದ್ಯಾಭ್ಯಾಸವು ಮಡಿಕೇರಿಯ ಸೆಂಟ್ರಲ್ ಹೈಸ್ಕೂಲ್ ನಲ್ಲಿಯೂ, ಪದವಿ ಪೂರ್ವ ಮತ್ತು ಪದವಿ ವಿದ್ಯಾಭ್ಯಾಸವನ್ನು ಸರ್ಕಾರಿ ಕಾಲೇಜಿನಲ್ಲಿಯೂ ಮಾಡಿದರು, ತದನಂತರ ಸ್ನಾತಕ್ಕೋತ್ತರ ಪದವಿಯನ್ನು 1962ನೇ ಸವಿಯಲ್ಲಿ ಮಾನಸ ಗಂಗೋತ್ರಿ ಮೈಸೂರಿನಲ್ಲಿ ಮಾಡಿದರು. ಮತ್ತು ತಮ್ಮ B.Ed., ವಿದ್ಯಾಭ್ಯಾಸವನ್ನು ಎಂ.ಎಸ್. ಸಂಜಯ ಕಾಲೇಜು, ಮಲ್ಲೇಶ್ವರಂ, ಬೆಂಗಳೂರು ಇಲ್ಲಿ 1968ರಲ್ಲಿ ಮುಗಿಸಿದರು.

ತದನಂತರ ಶ್ರೀಯುತರು ತಮ್ಮ ಮೊದಲ ನೌಕರಿಯನ್ನು ಸಹಶಿಕ್ಷಕರಾಗಿ 1962ರಿಂದ 1964 ರ ತನಕ ದಕ್ಷಿಣ ಕೊಡಗಿನ ಶ್ರೀಮಂಗಲ ಹೈಸ್ಕೂಲ್‌ನಲ್ಲಿ ತಮ್ಮ ಸೇವೆಯನ್ನು ಸಲ್ಲಿಸಿದರು. ನಂತರ 1964ರಿಂದ 1968ರ ತನಕ ಬೆಂಗಳೂರಿನ ಆರ್ಯ ವಿದ್ಯಾಶಾಲೆ ಶೇಷಾದ್ರಿಪುರಂ ಬೆಂಗಳೂರು ಇಲ್ಲಿ ಸೇವೆ ಗೈದು ಪುನಃ ಶ್ರೀಮಂಗಲ ಹೈಸ್ಕೂಲ್‌ಗೆ ವಾಪಾಸ್ಸಾಗಿ 1968-1971ರ ತನಕ ಸೇವೆಯಲ್ಲಿದ್ದು, 1971-1994ರ ತನಕ ಶ್ರೀ ಕಾವೇರಿ ಪದವಿ ಪೂರ್ವ ಕಾಲೇಜು ಭಾಗಮಂಡಲದಲ್ಲಿ ತಮ್ಮ ಕೊನೆಯ ಸೇವೆಯನ್ನು ಶಿಕ್ಷಣ ಕ್ಷೇತ್ರದಲ್ಲಿ ನಿಭಾಯಿಸಿ 1994ರಲ್ಲಿ ನಿವೃತ್ತರಾದರು.

ಶ್ರೀಯುತರು ಸೋಮವಾರಪೇಟೆ ತಾಲೂಕು ಕಾಜೂರು ಗ್ರಾಮದ ಶ್ರೀಮತ್ತು ಶ್ರೀಮತಿ ಬಾರನ ದೇವಯ್ಯ, ಲಕ್ಷಮ್ಮ ದಂಪತಿಗಳ ಪ್ರಥಮ ಪುತ್ರಿ ಜ್ಯೋತಿಯವರನ್ನು 1968ರಲ್ಲಿ ವಿವಾಹವಾದರು. ಇವರ ಪ್ರಥಮ ಪುತ್ರಿ ಮಲ್ಲಿಕ ತುಮಕೂರಿನಲ್ಲಿ ದೂರವಾಣಿ ವಿಮಯ ಕೇಂದ್ರದಲ್ಲಿ ತಂತ್ರಜ್ಞೆಯಾಗಿದ್ದಾಳೆ. ಇವರ ಪತಿ ಒಡ್ಡನ ರಾಮಚಂದ್ರ ತುಮಕೂರಿನ T.V.S. ಎಲೆಕ್ಟ್ರಾನಿಕ್ಸ್ ಕಂಪೆನಿಯಲ್ಲಿ ಅಸಿಸ್ಟೆಂಟ್ ಪ್ರೊಡಕ್ಷನ್ ಮೇನೆಜರ್ ಆಗಿದ್ದಾರೆ. ಶ್ರೀಯುತರ ದ್ವಿತೀಯ ಪುತ್ರಿ ದೇವಿಕಾ, ಕೆಂಜನ ಅಶೋಕ್‌ರವರ ಧರ್ಮಪತ್ನಿಯಾಗಿ, ಶಿವಮೊಗ್ಗದಲ್ಲಿ ಕರ್ನಾಟಕ ಗೃಹಮಂಡಳಿಯ ಉದ್ಯೋಗಿಯಾಗಿರುವ ಇವರ ಕೈಹಿಡಿದಿದ್ದಾರೆ. ಪುತ್ರ ಹರೀಶ್ ವಾಣಿಜ್ಯ ಪದವೀಧರನಾಗಿದ್ದು ಪಿತ್ರಾರ್ಜಿತ ಆಸ್ತಿಯ ಮೇಲ್ವಿಚಾರಣೆ ನಡೆಸುತ್ತಿದ್ದಾರೆ.

ಕುಲ್ಲಚನ ಕಾರ್ಯಪ್ಪನವರ ಸಮಾಜ ಸೇವೆ ಉನ್ನತವಾದದ್ದು. 1960-62ರಲ್ಲಿ ಮೈಸೂರಿನಲ್ಲಿ ತಮ್ಮ ವ್ಯಾಸಂಗ ನಿರತರಾಗಿದ್ದಾಗ ಸ್ಥಾಪನೆಯಾದ ಕೊಡಗು ಗೌಡ ವಿದ್ಯಾ ಶಾಖೆಯ ಸ್ಥಾಪಕ ಸದಸ್ಯರಾಗಿಯೂ 1966ರಿಂದ 68ರ ಬೆಂಗಳೂರಿನಲ್ಲಿ ಶಿಕ್ಷಕ ತರಬೇತಿಯ ಅವಧಿಯಲ್ಲಿ ಸ್ಥಾಪನೆಗೊಂಡ ಕೊಡಗು ಮತ್ತು ದ.ಕನ್ನಡ ಗೌಡ ಸಮಾಜದ ಸ್ಥಾಪಕ ಸದಸ್ಯನಾಗಿಯೂ ಮತ್ತು ಸಮಾಜದ ವತಿಯಿಂದ ಹೊರತರಲಾದ ಕೊಡಗು ಮತ್ತು ದ. ಕನ್ನಡ ಗೌಡ ಸಂಸ್ಕೃತಿ ಸಂಚಿಕೆಯ ಸಂಪಾದಕರಾಗಿಯೂ ದುಡಿದಿದ್ದಾರೆ. ಇದು ನಮ್ಮ ಜನಾಂಗದಲ್ಲಿಯೇ ಪ್ರಪ್ರಥಮ ಅರೆಭಾಷೆ ಮತ್ತು ಕನ್ನಡ ಭಾಷೆಯ ಸಂಚಿಕೆಯಾಗಿದೆ. ಅರೆ ಭಾಷಿಕ ಕವಿಗಳಲ್ಲಿ ಹಿರಿಯ ಕವಿಗಳಾಗಿ ಶ್ರೀಯುತರು ನೆನೆಸಲ್ಪಡುತ್ತಿದ್ದಾರೆ. ಭಾಗಮಂಡಲದಲ್ಲಿ ನೆಲೆಸಿದ ಅವಧಿಯಲ್ಲಿ ಸ್ಥಾಪನೆಯಾದ ಗೌಡ ಸಮಾಜದ ಸ್ಥಾಪಕ ಸದಸ್ಯರು ಮತ್ತು ಧಾನಿಗಳು ಆಗಿದ್ದಾರೆ.

ಪತ್ನಿ ಶ್ರೀಮತಿ ಜ್ಯೋತಿಯವರು ಭಾಗಮಂಡಲದ ಮಂಡಲ ಪಂಚಾಯತಿಗೆ ತಾವೂರು ಗ್ರಾಮದಿಂದ ಆಯ್ಕೆ ಗೊಂಡಿದ್ದು ಭಾಗಮಂಡಲ ಗೌಡ ಸಮಜದ ಪ್ರಥಮ ಆಡಳಿತ ಮಂಡಳಿಯ ನಿರ್ದೇಶಕರಾಗಿ ಸಹ ಕೆಲಸ ಮಾಡಿದ್ದಾರೆ. ಪ್ರಸ್ತುತ ಶ್ರೀಯುತರು ಕೃಷಿಕರಾಗಿ ತಮ್ಮ ಊರು ಕುಂಬಳದಾಳುವಿನಲ್ಲಿ ನೆಲೆ ನಿಂತರು ಸಹ ಜನಾಂಗದ ತುಂಬು ಅಭಿಮಾನದಿಂದ ಕೊಡಗು ಸಂಗಾತಿ ಪತ್ರಿಕೆಗೆ ಸಾಕಷ್ಟು ಕವನ, ಲೇಖನಗಳನ್ನು ಬರೆದು ಅರೆಭಾಷಿಕ ಸಾರಸ್ವತ ಲೋಕದಲ್ಲಿ ಹೆಗ್ಗಂಬವಾಗಿ ನಿಲ್ಲುವ ಶ್ರೀಯುತರ ಅಪಾರ ವ್ಯಕ್ತಿತ್ವದ ಪರಿಚಯವನ್ನು ಸಂಗಾತಿ ಓದುಗರಿಗೆ ಸಂಗಾತಿಯು ನೀಡುತ್ತಿರುವುದು ನಿಜಕ್ಕೂ ಹೆಮ್ಮೆಯೆನಿಸಿದೆ ಶ್ರೀಯುತರ ಲೇಖನಿಯಿಂದ ಇನ್ನು ಹಲವಾರು ಸಾಹಿತ್ಯ ಮೂಡಿ ಬರಲೆಂಬುದಾಗಿ ಕೊಡಗು ಸಂಗಾತಿ ಹಾರೈಸುತ್ತದೆ.

ಲೇಖನ : ಪಟ್ಟಡ ಪ್ರಭಾಕರ

---

### ನೆಗಾಡಿಕೆ

ನೆಂಟರ ಮನೆಗೆ ಬಂದವುಕೆ ಹೊಟ್ಟೆ ಇಸಿ
ಬೊತ್ತದೆ ಈ ಕೂಸ್‌ನ ಕೇಳ್ಳೋ, ಉಂಡಾತ್‌ನೇತ
ಕೂಸ್ ಹೇಳ್ತ್ ಅವ್ವ ಹೇಳಿಟ್ಟು, ನೀವ್
ಹೋದ ಮ್ಯಾಲೆ ಉಂಬದುತ

ಪಾಂಬರನ ಸೋಮಶೇಖರ್, ಬೆಂಗಳೂರು

# ಅಗ್ರ ಪಂಕ್ತಿಯಲ್ಲಿರುವ ಬೆಂಗಳೂರಿನ ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ

ಇತ್ತೀಚಿನ ದಿನಗಳಲ್ಲಿ ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಜನಾಂಗದವರು ತಮ್ಮ ನಿದ್ರಾವಸ್ಥೆಯಿಂದ ಎಚ್ಚೆತ್ತು ಒಂದು ರೀತಿಯ ಸಂಘಟನೆಯತ್ತ ದಾಪುಗಾಲು ಹಾಕುತ್ತಿರುವುದು ನಮ್ಮ ಜನಾಂಗ ಮುಂದುವರಿಯುತ್ತಿರುವ ಶುಭ ಸೂಚನೆಯೇ ಆಗಿದೆ. ಇದಕ್ಕೆ ಜೀವಂತ ಸಾಕ್ಷಿಗಳೆಂದರೆ 1997ರ ಆದಿಯಲ್ಲಿ ಮೊದಲ ಬಾರಿಗೆ ಹುಟ್ಟಿದ ಕೊಡಗು ಸಂಗಾತಿ ಪತ್ರಿಕೆಯ ಸೇವೆ ಅವಿಸ್ಮರಣೀಯ. ನಂತರ 1997ರ ಕೊನೆ ಭಾಗದಲ್ಲಿ ಅಭಿವೃದ್ಧಿಗಾಗಿ ಹುಟ್ಟಿದ ಕೊಡಗು ಗೌಡ ಅಕಾಡೆಮಿ ಮತ್ತು ಕೊಡಗು ಮಹಿಳಾ ಒಕ್ಕೂಟಗಳು. ಗೌಡ ಸಂಸ್ಕೃತಿಯ ಬಗ್ಗೆ ಕ್ಯಾಸೆಟ್ ಬಿಡುಗಡೆಯಾಗಿರುವುದು ಆಟೋಟಗಳು, ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಹಮ್ಮಿ ಕೊಂಡಿರುವುದು. ಅರೆಭಾಷೆ ಮತ್ತು ತುಳು ಭಾಷೆಗಳ ಬಗ್ಗೆ ವಿಶೇಷವಾದ ಒಲವು ತೋರಿ ಅವುಗಳಲ್ಲಿಯೇ ಭಾಷಣ ಮತ್ತು ಕಾರ್ಯಕ್ರಮಗಳನ್ನು ನಡೆಸುತ್ತಿರುವುದು, ಗೇಂಟಿ ಮತ್ತು ಕುಪ್ಪಸದಟ್ಟಿ ಹಾಕುತ್ತಿರುವುದು ನಮ್ಮ ಜನಾಂಗದ ಸಮಸ್ಯೆ ಮತ್ತು ಸಂಸ್ಕೃತಿಗಳ ಬಗ್ಗೆ ಪ್ರತಿಯೊಬ್ಬನಲ್ಲಿ ಕಾಳಜಿ ಹುಟ್ಟಿರುವುದು ನಿಜಕ್ಕೂ ಆಹ್ಲಾದಕರ ಬೆಳವಣಿಗೆಯಾಗಿದೆ.

ಇಂತಹ ತ್ವರಿತವಾದ ಬದಲಾವಣೆಗೆ ಕಾರಣವೇನೆಂದರೆ, ನಮ್ಮ ಕೆಲವು ಗೌಡ ಸಮಾಜಗಳು, ಸಂಘ ಸಂಸ್ಥೆಗಳು ಎಚ್ಚೆತ್ತು ತಮ್ಮ ತಮ್ಮ ಜವಾಬ್ದಾರಿಗಳನ್ನು ಅರಿತು ಸಮರ್ಪಕವಾಗಿ ಕಾರ್ಯ ನಿರ್ವಹಿಸುತ್ತಿರುವುದು ನಮ್ಮ ಜನಾಂಗದವರನ್ನು ಪ್ರತಿನಿಧಿಸಲು ಹುಟ್ಟಿಕೊಂಡಿರುವ "ಕೊಡಗು ಸಂಗಾತಿ ಪಾಕ್ಷಿಕವು" ಪ್ರಚಲಿತ ಹಲವು ವಿದ್ಯಮಾನಗಳನ್ನು ಎಂದರೆ ಕೊಡಗು ಪ್ರತ್ಯೇಕತೆಯ ಕೂಗು, ಅರೆಭಾಷೆ, ಸಂಸ್ಕೃತಿ, ತನ್ನತನ, ಸಮಾನತೆ, ಕೀಳರಿಮೆ ಒಲಸೆಗಾರಲ್ಲವೆಂಬ ವಿರುದ್ಧ ವಿದ್ಯಾವಂತ ಯುವ ಜನಾಂಗವಾದ ನಾವು ಯಾರಿಗೂ ಕಡಿಮೆ ಇಲ್ಲ ಎಂಬ ಹೋರಾಟದ ಚಲ. ಇತ್ಯಾದಿಗಳು.

ಬಹುಶಃ ನಾನು ನೋಡಿದ ಮತ್ತು ಕೇಳಿದ ಗೌಡ ಸಮಾಜಗಳಲ್ಲಿ ಆದರ್ಶವಾದ ಮೇಲ್ಪಂಕ್ತಿಯಲ್ಲಿ ನಿಲ್ಲುವ ಸಮಾಜವೆಂದರೆ ಬೆಂಗಳೂರಿನ ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ. ಈ ಸಮಾಜದಲ್ಲಿ ಹಿರಿಯ ಮತ್ತು ಯುವಕ ಧುರೀಣರು ಹಿಂದಿನಿಂದಲೂ ಬಹಳಷ್ಟು ಆದರ್ಶ ಹಾಗೂ ಮುಂದಾಲೋಚನೆಯ ಕಾರ್ಯಗಳಿಗೆ ಇಡೀ ಗೌಡ ಜನಾಂಗದಲ್ಲಿಯೇ ಹೆಸರುವಾಸಿಯಾಗಿದ್ದಾರೆ ಎಂದರೆ ಅತಿಶಯೋಕ್ತಿಯಲ್ಲ. ಗೌಡ ಸಂಸ್ಕೃತಿಯ ಹೊತ್ತಗೆಯನ್ನು ಮೊಟ್ಟ ಮೊದಲ ಬಾರಿಗೆ 1968ರಲ್ಲಿ ಬಿಡುಗಡೆ ಮಾಡಿದ ಹೆಗ್ಗಳಿಕೆ ಈ ಸಮಾಜದ್ದು. ಈ ಸಂಸ್ಥೆಯ ಕೂಸಾಗಿ ಹುಟ್ಟಿಕೊಂಡ ಕೆಂಪೇಗೌಡ ಗ್ರಾಮೀಣ ಗೃಹ ನಿರ್ಮಾಣ ಸಂಘ ನಮ್ಮ ಸಮಾಜ ಬಾಂಧವರಿಗೆ ಸುಮಾರು 200ಕ್ಕೂ ಹೆಚ್ಚಿನ ನಿವೇಶನಗಳನ್ನು ಬೆಂಗಳೂರಿನಲ್ಲಿ ಅಗ್ಗದ ಬೆಲೆಯಲ್ಲಿ ವಿತರಣೆ ಮಾಡಿದೆ ಎಂಬುದು ಸಂತೋಷವೆನಿಸುತ್ತದೆ, ಬೆಂಗಳೂರಿನಲ್ಲಿ ವಾಸವಾಗಿರುವ ಸಮಾಜ ಬಾಂಧವರ ಹೆಸರು, ವಿಳಾಸ, ವೃತ್ತಿಗಳನ್ನೊಳಗೊಂಡ ಕೈಪಿಡಿಯನ್ನು ಮಾಡಿ ಮೊಟ್ಟ ಮೊದಲಿಗೆ ಬಿಡುಗಡೆ ಮಾಡಿದ ಕೀರ್ತಿಗೂ ಈ ಸಮಾಜ ಪಾತ್ರವಾಗಿದೆ. ಇದರಿಂದ ಸ್ಫೂರ್ತಿಯನ್ನು ಪಡೆದು ಬೆಂಗಳೂರಿನ ಕೊಡಗು ಗೌಡ ಸಮಾಜ ಇತ್ತೀಚೆಗೆ ಕುಟುಂಬದ ಕೈಪಿಡಿಯನ್ನು ಬಿಡುಗಡೆ ಮಾಡಿರುವುದು ಅತೀ ಸಂತೋಷಕರ ಸುದ್ದಿ. ಎಲ್ಲಾ ಸಮಾಜಗಳು ಇಂತಹ ಕಾರ್ಯವನ್ನು ಕೈಗೆತ್ತಿ ಕೊಳ್ಳಬೇಕಾಗಿದೆ. ಇದಲ್ಲದೇ ಸಮಾಜದಲ್ಲಿ ಮಹಿಳೆಯ ಪಾತ್ರವನ್ನು ಪ್ರತಿ ಬಿಂಬಿಸಿ ಮೊಟ್ಟ ಮೊದಲ ಬಾರಿಗೆ ಗೌಡ ಮಹಿಳಾ ಸಮಾಜವನ್ನು ಹುಟ್ಟು ಹಾಕಿದ ಕೀರ್ತಿಯೂ ಈ ಸಮಾಜದ ಪಾತ್ರವಾಗಿದೆ. ಇದಕ್ಕಿಂತ ಮಿಗಿಲಾಗಿ ಗೌಡ ಸಮಾಜದ ಇತಿಹಾಸದಲ್ಲೇ ಮೊಟ್ಟ ಮೊದಲ ಬಾರಿಗೆ ಕ್ರೀಡಾ ಮೈದಾನದಲ್ಲಿ ಬೃಹತ್ ರೂಪದಲ್ಲಿ ಪಂದ್ಯಾಟಗಳ ಕ್ರೀಡಾಕೂಟವನ್ನು ಪ್ರಾರಂಬಿಸಿದ ಹೆಗ್ಗಳಿಕೆಗೂ ಪಾತ್ರವಾಗಿದೆ.

ಈ ಲೇಖನದಲ್ಲಿ ನಾನು ಒಬ್ಬ ಪ್ರೇಕ್ಷಕನಾಗಿ ಮೇಲೆ ಹೇಳಿದ ಕೊಡಗು ಮತ್ತು ದ. ಕ. ಗೌಡ ಸಮಾಜ 1999ರಲ್ಲಿ ಕೈಲು ಮುಹೂರ್ತ ಹಬ್ಬ ಮತ್ತು ಮಹಾಸಭೆಯ ಪ್ರಯುಕ್ತ ಸುಮಾರು ಎರಡು ತಿಂಗಳ ಕಾಲ ನಡೆಸಿಕೊಟ್ಟ ಕಾರ್ಯಕ್ರಮದ ಬಗ್ಗೆ ಕೆಲವು ವಿಷಯವನ್ನು ಹೇಳಲು ಬಯಸುತ್ತೇನೆ.

ನನಗೆ ನನ್ನ ಸ್ನೇಹಿತನೊಬ್ಬ ಈ ಸಮಾಜದ ಚಟುವಟಿಕೆಗಳ ಬಗ್ಗೆ ಮೊದಲಿನಿಂದ ಹೇಳುತ್ತಿದ್ದರೂ ಸಮಯದ ಅಭಾವದಿಂದಲೂ, ತಾತ್ಸಾರ ಮನೋಭಾವದಿಂದಲೂ ಉದಾಸೀನತೆಯಿಂದಲೂ ಸಮಾಜದ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿರಲಿಲ್ಲ. ಆದರೆ ಮೂರು ನಾಲ್ಕು ವರ್ಷಗಳಿಂದ ಈ ಸಮಾಜದ ಚಟುವಟಿಕೆಗಳ ಬಗ್ಗೆ ಕೇಳಿದ್ದರಿಂದ ನನ್ನ ಸ್ನೇಹಿತನ ಒತ್ತಾಯದಿಂದಲೋ ಏನೋ ಆಮಂತ್ರಣ ಪತ್ರಿಕೆಯಲ್ಲಿ ಮುದ್ರಿಸಿದ ಎಲ್ಲಾ ಕಾರ್ಯಕ್ರಮದಲ್ಲಿ ಭಾಗವಹಿಸಲು ನಿರ್ಧರಿಸಿದೆ.

ಫಸ್ಟ್ ಇಂಪ್ರೆಷನ್ ಈಸ್ ದಿ ಬೆಸ್ಟ್ ಇಂಪ್ರೆಷನ್" ಎನ್ನುವಂತೆ ಆಗಸ್ಟ್ 8ರಂದು ಬಿ. ಇ. ಎಲ್. ಕ್ರೀಡಾಂಗಣದಲ್ಲಿ ನಡೆದ ಪಂದ್ಯಾಟದಿಂದಲೇ ನಾನು ಆಕರ್ಷಿತಗೊಂಡೆ. ಪುರುಷರಿಗೆ ವಾಲಿಬಾಲ್, ಮಹಿಳೆಯರಿಗೆ ಥ್ರೋಬಾಲ್ ಮತ್ತು ಮಕ್ಕಳಿಗೆ ಕ್ರಿಕೆಟ್ ಪಂದ್ಯಾಟಗಳನ್ನು ಏರ್ಪಡಿಸಲಾಗಿತ್ತು. ಸುಮಾರು 400ಕ್ಕೂ ಹೆಚ್ಚು ಕ್ರೀಡಾಭಿಮಾನಿಗಳು ನೆರೆದಿದ್ದ ಈ ಪಂದ್ಯಾಟಗಳಲ್ಲಿ ವಾಲೀಬಾಲ್‌ನಲ್ಲಿ 12 ತಂಡಗಳು, ಥ್ರೋಬಾಲ್‌ನಲ್ಲಿ 6 ತಂಡಗಳು ಮತ್ತು ಬಾಲಕರ ಕ್ರಿಕೆಟ್‌ನಲ್ಲಿ 4 ತಂಡಗಳು ಭಾಗವಹಿಸಿದ್ದವೆಂದು ಪಂದ್ಯಾಟಗಳ ಪ್ರಧಾನ ನಿಯೋಜಕರಾದ ಶ್ರೀ ಭವಾನಿ ಶಂಕರ್‌ರವರು ತಿಳಿಸಿದರು. ಕ್ರೀಡಾಪಟುಗಳು ನಿರೀಕ್ಷೆಗೂ ಮೀರಿದ ಪ್ರದರ್ಶನವನ್ನು ನೀಡಿದರು ಎನ್ನುವುದರಲ್ಲಿ ಎರಡು ಮಾತಿಲ್ಲ. ಬಾಲಕರ ಕ್ರಿಕೆಟ್ ವಿಭಾಗದಲ್ಲಂತೂ ಅನಿಲ್ ಕುಮಾರ್ ಎಂಬ ಬಾಲಕ ಸೊಗಸಾಗಿ ಆಟವಾಡಿ ಒಂದು ಶತಕವನ್ನು ಸಹ ಬಾರಿಸಿ ಎಲ್ಲರ ಮನಸ್ಸನ್ನು ಸೂರೆಗೊಂಡ. ಈತನಿಗೆ ಒಳ್ಳೆಯ ಭವಿಷ್ಯವಿದೆ ಎಂದು ಹೇಳಲೇಬೇಕು. ಈ ಪಂದ್ಯಾಟಗಳು ಸೌಹಾರ್ದಪೂರಕವಾಗಿ ಕ್ರೀಡಾ ಮನೋಭಾವನೆಯಿಂದ ನಡೆದವು. ನಿಯೋಜಕರು ಬಹಳ ಸುಂದರವಾಗಿ ನಡೆಸಿಕೊಟ್ಟಿದು ಅತೀ ಸಂತೋಷದ ವಿಷಯ.

❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖❖

ದಿನಾಂಕ 8-8-1999ರ ಪಂದ್ಯಾಟದಿಂದ ಆಕರ್ಷಿತನಾದ ನಾನು 22-8-1999ರಂದು ನಡೆದ ಅಥ್ಲೆಟಿಕ್ಸ್ ಕ್ರೀಡಾಕೂಟಕ್ಕೆ ಹೋಗಿ ವೀಕ್ಷಿಸಲು ನಿರ್ಧರಿಸಿದೆ. ಈ ಕ್ರೀಡಾಕೂಟ ಬಿ.ಇ. ಎಲ್.ನ ಅಧಿಕಾರಿಯಾಗಿರುವ ಶ್ರೀಮಾನ್ ತಿಮ್ಮಪ್ಪ ಗೌಡರಿಂದ ಸರಳವಾಗಿ ಉದ್ಘಾಟನೆ ಆಯಿತು. ಮೈದಾನದಲ್ಲಿ ಗಂಟೆಗಳು ಕಳೆದಂತೆ ಹಬ್ಬದ ವಾತಾವರಣ ಸೃಷ್ಟಿಯಾಯಿತು. ಸುಮಾರು 600ರಿಂದ 700ಜನರು ಸೇರಿದ್ದರು. ಕ್ರೀಡಾಕೂಟಗಳು ಜನರನ್ನು ಒಂದಡೆ ಸೇರಿಸುವ ಮತ್ತು ಬೆಸೆಯುವ ಸಾಧನಗಳು ಎಂಬುದರ ಅರಿವು ನನಸಾಯಿತು. ಮೂರು ವರ್ಷದ ಕಿನ್ನರರಿಂದ ಹಿಡಿದು ಎಪ್ಪತ್ತು ವರುಷದ ವಯಸ್ಕರು ಸುಮಾರು 2ತಿಂಗಳು ಕಾರ್ಯ ಚಟುವಟಿಕೆಗಳಲ್ಲಿ ಉತ್ಸಾಹದಿಂದ ತಮ್ಮ ತಮ್ಮ ಕ್ರೀಡೆಗಳಲ್ಲಿ ಭಾಗವಹಿಸಿದನ್ನು ಕಂಡು ನಾನು ಉತ್ಸಾಹಭರಿತನಾಗಿ ಭಾಗವಹಿಸಿದರೂ ಬಹುಮಾನ ಪಡೆಯುವಲ್ಲಿ ವಿಫಲನಾದೆ. ಬಿ.ಇ.ಎಲ್. ಮೈದಾನದಲ್ಲಿ ಒಂದೆಡೆ ಹಸುಳೆಯರು ಓಡುವುದು ಮತ್ತು ಕಾಳು ಹೆಕ್ಕುವ ಕಾರ್ಯಕ್ರಮವಿದ್ದರೆ, ಇನ್ನೊಂದೆಡೆ ಮಹಿಳೆಯರು ಪುರುಷರು ಗುಂಡುಕಲ್ಲು ಎಸೆತದ ಕಾರ್ಯಕ್ರಮ ಮತ್ತೊಂದೆಡೆ ಉದ್ದ ಜಿಗಿತವಿದ್ದರೆ, ಮಗದೊಂದೆಡೆ ಟಾಯ್‌ಗನ್ ಮತ್ತು ಏರ್‌ಗನ್ ಶೂಟಿಂಗ್, ಸಂಗೀತ ಕುರ್ಚಿ, ನಡಿಗೆ, ನಿಂಬೆ ಹಣ್ಣು ಮತ್ತು ಚಮಚ ಹೀಗೆ ಹತ್ತು ಹಲವಾರು ಕಾರ್ಯಕ್ರಮಗಳು ಮಿಂಚಿನ ವೇಗದಲ್ಲಿ ಸಾಗಿದವು. ಈ ಕ್ರೀಡಾಕೂಟಗಳನ್ನು ಸಾಂಗವಾಗಿ ನಡೆಸಿಕೊಟ್ಟ ಶ್ರೀ ದಂಬೆಕೋಡಿ ಆನಂದ್‌ರವರ ನೇತೃತ್ವದ ತಂಡವನ್ನು ಅಭಿನಂದಿಸಲೇ ಬೇಕು. ಈ ಕ್ರೀಡಾಕೂಟದಲ್ಲಿ **ಕಲ್ಲುಮುಟ್ಲು ಬಸಪ್ಪ** ಮತ್ತು **ಗಣೇಶ್ ಕುಮಾರ್** ಪುರುಷರ ವಿಭಾಗದಲ್ಲಿಯೂ **ಶ್ರೀಮತಿ ಸುಮಿತ್ರ ನಿಂಗರಾಜು** ಮತ್ತು **ಚೆರಿಯಮನೆ ಜ್ಯೋತಿ ಮುತ್ತಣ್ಣ** ಮಹಿಳೆಯರ ವಿಭಾಗದಲ್ಲಿಯೂ ಜಂಟಿಯಾಗಿ ವೈಯಕ್ತಿಕ ಪ್ರಶಸ್ತಿಗಳನ್ನು ಹಂಚಿಕೊಂಡರು.

ಈ ಸಮಾಜವು ಬರೀ ಆಟೋಟಗಳನ್ನು ಮಾತ್ರ ನಡೆಸಿ ಕೊಡುವುದರಲ್ಲೆ ನಿರತವಾಗಿಲ್ಲ. ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ತಮ್ಮ ಅಭಿರುಚಿಯನ್ನು ತೋರಿಸಿದ್ದಾರೆಂದು ನನ್ನ ಸ್ನೇಹಿತ ಆಗಾಗ್ಗೆ ಹೇಳುತ್ತಿದ್ದರಿಂದ ಆಟೋಟಗಳನ್ನು ಇಷ್ಟು ಅಚ್ಚುಕಟ್ಟಾಗಿ ನಡೆಸಿದ ಇವರು ಸಾಂಸ್ಕೃತಿಕ ಸ್ಪರ್ಧೆಗಳನ್ನು ಹೇಗೆ ನಡೆಸಿ ಕೊಡುತ್ತಾರೆಂಬ ಸಹಜ ಕುತೂಹಲ ನನ್ನನ್ನು ಕಾಡುತ್ತಿತ್ತು.29-8-1999 ರಂದು ಭಾನುವಾರ ಗಂಗೇನಹಳ್ಳಿಯ ಗೌಡ ಸಮಾಜದಲ್ಲಿ ಸಾಂಸ್ಕೃತಿಕ ಸ್ಪರ್ಧೆ ಮತ್ತು 5-9-1999ರ ಎ. ಡಿ. ಎ. ರಂಗಮಂದಿರದಲ್ಲಿ ನಡೆಯುವ ಸಾಂಸ್ಕೃತಿಕ ಕಾರ್ಯಕ್ರಮಕ್ಕೆ ಆಯ್ಕೆ ಕಾರ್ಯಕ್ರಮವಿತ್ತು. ಈಗಾಗಲೇ ಆಮಂತ್ರಣದಲ್ಲಿಯೂ ಮತ್ತು ಕೊಡಗುಸಂಗಾತಿ ಪತ್ರಿಕೆಯಲ್ಲಿಯೂ ಪ್ರಕಟವಾದ "ಸೌಂದರ್ಯ ಸ್ಪರ್ಧೆ" ಎಂಬ ವಿಶೇಷ ಕಾರ್ಯಕ್ರಮವು ಎಲ್ಲರನ್ನೂ ಆಕರ್ಷಿಸಿತು. ಕಾರ್ಯಕ್ರಮ ನಿರೀಕ್ಷೆಯಂತೆ ಸೌಂದರ್ಯ ಸ್ಪರ್ಧೆಯಿಂದಲೆ ಪ್ರಾರಂಭವಾಯಿತ. ಸೌಂದರ್ಯ ಸ್ಪರ್ಧೆಯಲ್ಲಿ ಪ್ರಥಮ ಯುವಕ ವಿಜೇತರನ್ನು ಮಿಸ್ಟರ್ ಬೋಜಣ್ಣ ಎಂತಲೂ, ದ್ವಿತೀಯ ವಿಜೇತರನ್ನು ಗೌಡ ಕೇಸರಿಯಂತಲೂ, ಯುವತಿಯರ ಪ್ರಥಮ ವಿಜೇತರನ್ನು ಮಿಸ್ ಬೋಜಕ್ಕಿಯೆಂತಲೂ ದ್ವಿತೀಯ ವಿಜೇತರನ್ನು ಮಿಸ್ ಭಾರತಿಯೆಂತಲೂ ನಾಮಕರಣ ಮಾಡಿದ್ದರು. ಅಧಿಕ ಸಂಖ್ಯೆಯಲ್ಲಿ ಅಂದರೆ ಸುಮಾರು 500 ಮಂದಿ ಕಲಾಭಿಮಾನಿಗಳು ನೆರೆದು ಮಧುರವಾದ ಹಾಡುಗಳನ್ನು ಅದ್ಭುತ ನೃತ್ಯಗಳನ್ನು ಉತ್ಸಾಹಭರಿತವಾಗಿ ನೋಡಿ ತನ್ಮಯವಾದರು. ಸೌಂದರ್ಯ ಸ್ಪರ್ಧೆಯ ಲಿಖಿತ ಮತ್ತು ಮೌಖಿಕ ಪರೀಕ್ಷೆಯ ವಿಶೇಷತೆಯೆಂದರೆ ನಮ್ಮ ಅಂದರೆ ಗೌಡ ಸಂಸ್ಕೃತಿಯ ಬಗ್ಗೆಯೆ ವಿಶೇಷವಾದ ಒತ್ತು ನೀಡಲಾಗಿತ್ತು. ಜನ ಸ್ಪಂದನ ನಿರೀಕ್ಷೆಗೂ ಮೀರಿದ್ದು ಎಂದು ನಿಯೋಜಕರು ಆಗಿಂದಾಗ್ಗೆ ಹೇಳುತ್ತಿದ್ದುದು ನನಗೆ ಮೈ ರೋಮಾಂಚನವಾಗುತ್ತಿತ್ತು.

ಬಹುಶಃ ದೇಶದ ನಾನಾ ಭಾಗಗಳ ಗೌಡಸಮಾಜದ ಚರಿತ್ರೆಯಲ್ಲಿಯೇ ಗೌಡ ಸಮಾಜವೊಂದು ನಡೆಸಿದ ಅತ್ಯಂತ ಆಕರ್ಷಕ ಮತ್ತು ಅಪೂರ್ವ ಸಾಂಸ್ಕೃತಿಕ ಕಾರ್ಯಕ್ರಮವೆಂದರೆ 5-9-1999 ರಂದು ಬೆಂಗಳೂರು ನಗರದ ಎ.ಡಿ.ಎ. ಕಲಾ ಮಂದಿರದಲ್ಲಿ ನಡೆದ ಸಾಸ್ಕೃತಿಕ ಸಂಜೆಯೆಂದರೆ ಅತಿಶಯವಾಗಲಾರದು.

ಕಾರ್ಯಕ್ರಮ ಸಂಜೆ ಮೂರುವರೆ ಗಂಟೆಗೆ ಮಹಾಬಲೇಶ್ವರರ ಪ್ರಾರ್ಥನೆಯೊಂದಿಗೆ ಪ್ರಾರಂಭವಾಗಿ ನಿರಂತರ ಮಳೆ ಮತ್ತು ಚುನಾವಣೆಯ ನಡುವೆಯೂ ಪ್ರೇಕ್ಷಕರ ಹೃದಯನಾಡಿಯನ್ನು ರಾತ್ರಿ 9 ಗಂಟೆಯವರೆಗೂ ಹಿಡಿದಿಟ್ಟಿತು. ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜದ ಮಹಿಳಾ ಘಟಕವು ವಿಶೇಷವಾಗಿ ಕುಲದೇವರಾದ ವೆಂಕಟರಮಣ ಹರಿಸೇವೆಯನ್ನು ಭಕ್ತಿ ಪೂರಕವಾಗಿ ನಡೆಸಿಕೊಟ್ಟರು. ಪುಟ್ಟ ಮಕ್ಕಳಾದ ಪ್ರಶಾಂತ್, ಡಾನ್ ಬೋಪಯ್ಯ, ಚರಿತ ಮತ್ತು ಸಂಗಡಿಗರು ವೋದನ ಪ್ರಿಯ ಮತ್ತು ಯಶವಂತ್‌ರಿಂದ ಸುಂದರವಾದ ಕಾರ್ಯಕ್ರಮವಿತ್ತು.

ನೃತ್ಯ ಕಾರ್ಯಕ್ರಮದಲ್ಲಿ ಮಿಂಚಿದ ಕಲಾವಿದರೆಂದರೆ, ಅಂಜಲಿ ಉತ್ತಪ್ಪ, ಧೃತಿ ಪೊನ್ನಪ್ಪ, ಆಶಿದ ನಾಣಯ್ಯ ತಂಡ, ದಿಲೀಪ್ ಚಿನ್ನಪ್ಪ ತಂಡ, ಮಲಾರ ಸ್ಮತಿ, ಶಿಲ್ಪ ಪೂವಯ್ಯ, ಪ್ರತಿಮಾ, ಕೋಮಲ ಇತರರು, ಹಾಗೇ ಹಿರಿಯರ ಭರತ ನಾಟ್ಯದಲ್ಲಿ ಮನೋಜ್ಞ ಅಭಿನಯ ನೀಡಿದ ಕಲಾವಿದರೆಂದರೆ ಶ್ರೀದೇವಿ ಮತ್ತು ಸಹನ ಗಿರಿಯಪ್ಪ, ಅಮ್ಮಾಜೀರ ತಂಡದಲ್ಲಿ ಗಮನ ಸೆಳೆದ ಕಲಾವಿದರೆಂದರೆ ದಿವ್ಯಾಗೋಪಾಲ್

ಮುಖ್ಯ ಅತಿಥಿಗಳಲ್ಲಿ ಒಬ್ಬರಾಗಿದ್ದ ಲಕ್ಷ್ಮಣ ಸುವರ್ಣರ, ಮಧುರ ಸಂಗೀತಕ್ಕೆ ಸುಮಧುರವಾಗಿ ಹಾಡಿದ ಕಲಾವಿದರೆಂದರೆ ನೀತಾ, ದೇವಂಗೊಡಿ, ಭವಾನಿ ಶಂಕರ್, ಶ್ವೇತಾಕೊರಗಪ್ಪ, ಅಮೂಲ್ಯ, ಮೀರಾ, ಸವಿತಾ ಬಿ.ಎಸ್., ಸವಿತಾ ಕಂಟುಕಾಡ್, ಜ್ಯೋತಿ ಕುಶಾಲಪ್ಪ, ಕೊಟೇರ ಹರೀಶ್, ಚಂದ್ರ ಶೇಖರ್, ಕಾವೇರಪ್ಪ ಮತ್ತು ವಸಂತಿ ಪಳಂಗಪ್ಪ ಹಾಗೂ ತಂಡದವರು.

ವೈಶಾಲಿ ತಂಡದವರ ರಾಷ್ಟ್ರೀಯ ಭಾವೈಕ್ಯತೆ ಎಲ್ಲರ ಗಮನ ಸೆಳೆದ ಮತ್ತೊಂದು ಕಾರ್ಯಕ್ರಮ ಸೌಂದರ್ಯ ಸ್ಪರ್ಧೆಯ ಅಂತಿಮ ಸುತ್ತನ್ನು ಇಲ್ಲಿ ಅಚ್ಚುಕಟ್ಟಾಗಿ ನಡೆಸಿಕೊಡಲಾಯಿತು. ಮಿಸ್ಟರ್ ಬೋಜಣ್ಣನಾಗಿ ದೇವೀ ಪ್ರಸಾದ್, ಗೌಡ ಕೇಸರಿಯಾಗಿ ಪ್ರಶಾಂತ್, 'ಮಿಸ್ ಬೋಜಕ್ಕಿ'ಯಾಗಿ ಕೆ. ಪವಿತ್ರ 'ಮಿಸ್

ಭಾರತಿ'ಯಾಗಿ ದೀಪಾ ಮೋನಪ್ಪ ಆಯ್ಕೆಯಾದರು. ಈ ವಿಜೇತರಿಗೆ ಬಹುಮಾನ ವಿತರಣೆಯನ್ನು ಮಾಡಿದವರು ಈ ಸಮಾಜಕ್ಕೆ ಅವಿರತ ನಿರಂತರವಾಗಿ ದುಡಿಯುತ್ತಲೇ ಬಂದ ಗೌಡ ಜನಾಂಗದ ಭೀಷ್ಮರೆಂದೇ ಪ್ರಾಖ್ಯಾತಿಯಾಗಿರುವ ಸಾಹಿತಿ ಪ್ರೊ. ಪೂಜಾರಿ ಮೊಣ್ಣಪ್ಪನವರು.

ನಮ್ಮ ಗೌಡ ಜನಾಂಗದವರು ಹಿಂದೆಂದೂ ಮಾಡದ ಫ್ಯಾಶನ್ ಪೆರೇಡ್ ಕಾರ್ಯಕ್ರಮವನ್ನು ಅತೀ ಸುಂದರವಾಗಿ ಸುಂದರಿಯರೊಡನೆ ಯಶಸ್ವಿಯಾಗಿ ನಡೆಸಿಕೊಟ್ಟವರು ವೈಶಾಲಿ ಅಮರನಾಥ್. ಈ ಕಾರ್ಯಕ್ರಮ ಇಂದ್ರಲೋಕವನ್ನು ಧರೆಗಿಳಿಸಿಂದತಿತ್ತು. ಪದ್ದತಿಯಂತೆ ಇಳಿಸಿಕೊಡುವ ಕಾರ್ಯಕ್ರಮವನ್ನು ಅತೀ ಸುಂದರವಾಗಿ ನಡೆಸಿಕೊಟ್ಟವರು ಕೊಡಗು ಮತ್ತು ದಕ್ಷಿಣ ಕನ್ನಡ ಮಹಿಳಾ ಘಟಕದವರು. ಇವರ ಉತ್ಸಾಹ ಕಾರ್ಯಕ್ರಮಕ್ಕೆ ಮೆರುಗು ನೀಡಿತ್ತು.

ಮುಖ್ಯ ಅತಿಥಿಯವರಾದ ಖ್ಯಾತ ಚಲನಚಿತ್ರನಟ ಅಂಬರೀಷ್‌ರವರ ಅನುಪಸ್ಥಿತಿಯಲ್ಲಿ ಗಮನ ಸೆಳೆದ ಅತಿಥಿ ಚಲನಚಿತ್ರನಟಿ ಸುಮಾರು 40 ಚಲನ ಚಿತ್ರಗಳಲ್ಲಿ ನಟಿಸಿದ ನಮ್ಮವರೆ ಆದ ಅನಿತಾರಾಣಿಯವರು. ನಂಗಾರು ಲಿಂಗರಾಜುರವರ ಸುಂದರ ನಿರೂಪಣೆ ಸಮಾರಂಭಕ್ಕೆ ಮೆರುಗು ನೀಡಿತ್ತು.

ಕಟ್ಟಕಡೆಯ ಹಾಗೂ ಅತೀ ಮುಖ್ಯ ಸಮಾರಂಭ ವಾರ್ಷಿಕ ಮಹಾಸಭೆ ಮತ್ತು ಕೈಲು ಮೂಹೂರ್ತ ಕಾರ್ಯಕ್ರಮ 26-9-99 ರಂದು ಜಸ್ಮಾ ಭವನದಲ್ಲಿ ನಡೆಯಿತು. ಸುಮಾರು ಸಾವಿರಕ್ಕಿಂತಲೂ ಹೆಚ್ಚು ಜನರು ನೆರೆದಿದ್ದ ಈ ಸಮಾರಂಭದ ಅಧ್ಯಕ್ಷತೆಯನ್ನು ಹಾಲಿ ಅಧ್ಯಕ್ಷರಾದ ಶ್ರೀದಂಬೆಕೋಡಿ ಆನಂದರವರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಕೊಡಗು ಜಿಲ್ಲಾ ಪಂಚಾಯತ್ ಅಧ್ಯಕ್ಷರಾದ ಶ್ರೀ ಊರು ಬೈಲ್ ಜಯಪ್ರಕಾಶ್‌ರವರು, ಶ್ರೀ ಡಿ. ವಿ. ಶಿವರಾಂ, ಶ್ರೀಮತಿ ಪೂಜಾರಿರ ಭಾಗೀರಥಿ ಮೊಣ್ಣಪ್ಪ, ಡಾ. ವಸಂತಿ ವಿಜಯ ಮೂರ್ತಿ ಮತ್ತು ಶ್ರೀ ದಂಬೇಕೋಡಿ ಮಾದಪ್ಪನವರು ಭಾಗವಹಿಸಿದ್ದರು. ಭೋಜನ ಹಾಗೂ ಬಹುಮಾನ ವಿತರಣೆ ಕಾರ್ಯಕ್ರಮದೊಂದಿಗೆ ಸಭೆ ಮುಕ್ತಾಯವಾಯಿತು.

ಈ ಎಲ್ಲಾ ಕ್ರೀಡಾಕೂಟಗಳು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಸಮಾರಂಭಗಳನ್ನು ವೀಕ್ಷಿಸಿದ ನನಗೆ ಒಂದು ನಿಚ್ಚಳ ನಿಲವು ದೊರೆತಂತಾಯಿತು. ಅದೇನೆಂದರೆ ಒಂದು ಸಮಾಜದ ಪದಾಧಿಕಾರಿಗಳು ಮತ್ತು ಬಂಧುಗಳು ಒಂದುಗೂಡಿದರೆ ಎಂತಹ ದೊಡ್ಡ ಸಾಧನೆ ಮಾಡಬಹುದೆಂಬುದನ್ನು ಬೆಂಗಳೂರಿನ ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ ತೋರಿಸಿ ಕೊಟ್ಟಿದೆ ಎಂಬುದು. ಮೂಲೆ ಮೂಲೆಯಲ್ಲಿರುವ ಬಂಧುಗಳನ್ನು ಕಾರ್ಯಕ್ರಮಗಳ ಮೂಲಕ ಒಂದೆಡೆ ಸೇರಿಸುವ ಮತ್ತು ಬೆರೆಯುವಂತೆ ಮಾಡಿರುವ ಗಣ್ಯ ಕಾರ್ಯವನ್ನು ಈ ಸಮಾಜ ಮಾಡಿದೆ. ಈ ರೀತಿಯಲ್ಲಿ ಕೊಡಗು ಮತ್ತು ದ. ಕ. ಜಿಲ್ಲೆಯೆಂಬ ಭೇದವಿಲ್ಲದೆ ಭಾಷೆ ಮತ್ತು ಸಂಸ್ಕೃತಿಯ ಆಚಾರಗಳ ಮೂಲಕ ದೂರದ ಬೆಂಗಳೂರಿನಲ್ಲಿ ಬೆಸುಗೆಯಾಗುತ್ತಿರುವುದು ನಿಜಕ್ಕೂ ಜನಾಂಗ ಅಭಿವೃದ್ಧಿ ಪಥದತ್ತ ಮುನ್ನುಗ್ಗುವ ಶುಭಸೂಚನೆ ಎಂದು ಹೆಚ್ಚಿನವರ ಅಭಿಪ್ರಾಯವಾಗಿದೆ. ಈ ಸಮಾಜದ ಪದಾಧಿಕಾರಿಗಳಿಗೆ ಮತ್ತು ಸದಸ್ಯರಿಗೆ ಅನಂತ ಅನಂತ ಅಭಿನಂದನೆಗಳು.

ಈ ಸಂದರ್ಭದಲ್ಲಿ ಸ್ವಾಮಿ ವಿವೇಕಾನಂದರ ಅಮರ ವಾಣಿಯೊಂದು ನೆನಪಿಗೆ ಬರುತ್ತದೆ. "ಏಳಿ ಎದ್ದೇಳಿ, ಗುರಿ ಮುಟ್ಟುವ ತನಕ ನಿಲ್ಲದಿರಿ" ಎಂದು ಇದನ್ನು ನಮ್ಮ ಸಮಾಜದ ಬಾಂಧವರು ಅರಿತುಕೊಳ್ಳುವ ಕಾಲ ಸನ್ನಿಹಿತವಾಗಿದೆ. ಕರ್ನಾಟಕ ರಾಜಧಾನಿಯಲ್ಲಿದ್ದು ಹಾಗೂ ಅತೀ ವಿದ್ಯಾವಂತರೇ ಇರುವ ಬೆಂಗಳೂರಿನಲ್ಲಿ ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜವೆಂದು ಒಂದು, ಹಾಗೂ ಕೊಡಗು ಗೌಡ ಸಮಾಜವೆಂದು ಇನ್ನೊಂದು ಸಮಾಜದ ಅವಶ್ಯಕತೆ ಇದೆಯೇ? ಮದುವೆ, ನಾಮಕರಣ, ಹಬ್ಬ ಹರಿದಿನ, ಸಾವು ನೋವುಗಳಲ್ಲಿ ದಕ್ಷಿಣ ಕನ್ನಡ ಮತ್ತು ಕೊಡಗು ಗೌಡ ಜನಾಂಗದವರು ಪರಸ್ಪರ ಬೆರೆಯದೆ ಎರಡು ಸಮಾಜವನ್ನು ಏಕೆ ಕಟ್ಟಿಕೊಂಡಿದ್ದಾರೆ ಎನ್ನುವುದು ಯಕ್ಷ ಪ್ರಶ್ನೆಯಾಗಿಯೇ ಉಳಿದಿದೆ. ಇದರ ಬಗ್ಗೆ ನಮ್ಮ ಬಾಂಧವರು "ಕೊಡಗು ಸಂಗಾತಿಯ" ಮೂಲಕ ತಮ್ಮ ಅಭಿಪ್ರಾಯಗಳನ್ನು ತಿಳಿಸಬೇಕಾಗಿ ನನ್ನ ಕಳಕಳಿಯ ಮನವಿ.

**ಶ್ರೀ ಬಿ. ಡಿ. ಗಣಪತಿ**
**ಚೊಕ್ಕಸಂದ್ರ, ಪೀಣ್ಯ ದಾಸರಹಳ್ಳಿ, ಬೆಂಗಳೂರು.**

**"ಬೆಸುಗೆ" ಎಂಬ ಶಿರೋನಾಮೆಯಡಿಯಲ್ಲಿ ಮೇಲಿನ ವಿಷಯಕ್ಕೆ ಸಂಬಂದಿಸಿದಂತೆ ಉತ್ತಮವಾದ ಲೇಖನಗಳನ್ನು ಖಂಡಿತ ಪ್ರಕಟಿಸುತ್ತೇವೆ. ಆದರೆ 2ಪುಟಗಳ ಮಿತಿಯೊಳಗಿರಲಿ ಎಂಬ ಅರಿವಿರಲಿ**

**ಸಂಪಾದಕಿ**

## ನಿಮಗಿದು ಗೊತ್ತೆ?

ಇಂಗ್ಲೆಂಡಿನ ಕೆಂಟ್ ಪ್ರಾಂತ್ಯದಲ್ಲಿರುವ ನೋಲ್ ಅರಮನೆ ತಿಂಗಳುಗಳನ್ನು ಸೂಚಿಸುವ ರೀತಿಯಲ್ಲಿ ಹನ್ನೆರಡು ಪ್ರಾಂಗಣಗಳನ್ನು, ವಾರಗಳನ್ನು ಸೂಚಿಸುವಂತೆ ಐವತ್ತೆರಡು ಮೆಟ್ಟಿಲುಗಳನ್ನು, ದಿನಗಳನ್ನು ಸೂಚಿಸುವ ಬಗೆಯಲ್ಲಿ ಮುನ್ನೂರ ಅರವತ್ತೈದು ಕಿಟಕಿಗಳನ್ನು ಇಟ್ಟು ಅರಮನೆಯನ್ನು ನಿರ್ಮಿಸಲಾಗಿದೆ.

**ನಡುವಟ್ಟಿರ ಕಾಶಿ ಪಳಂಗಪ್ಪ**

## ಮಾಜಿ ಸೈನಿಕರಿಗೆ ಸನ್ಮಾನ

ಆಗಸ್ಟ್ 15ರಂದು ಸ್ವಾತಂತ್ರ್ಯ ದಿನಾಚರಣೆಯ ಅಂಗವಾಗಿ ಕುಶಾಲನಗರ ರೋಟರಿ ಸಂಸ್ಥೆಯವರು ಕುಶಾಲನಗರ ಹೋಬಳಿಯ ಸುಮಾರು ನಲವತ್ತೇಳು ಮಂದಿ ಮಾಜಿ ಸೈನಿಕರನ್ನು ಸನ್ಮಾನಿಸಲಾಯಿತು. ಮುಖ್ಯ ಅತಿಥಿಯಾಗಿ ನಿವೃತ್ತ ಮೇಜರ್ ಜನರಲ್ ಬಿ. ಎ. ಕಾರ್ಯಪ್ಪನವರು ಆಗಮಿಸಿದ್ದರು.

**ವರದಿ : ಕುಂಭಗೌಡನ ಸೋಮಣ್ಣ, ಕುಶಾಲನಗರ**




✦ ಕೌಂಡಿನ್ಯ

ಧಾರವಾಹಿ -16

ಮತ್ತೊಂದು ಶಾಕಿಂಗ್ ನ್ಯೂಸ್ !

ಎದೆ ನಡುಗಿಸುವ ಸುದ್ದಿ !

ಸಂಪಿಗೆ ಪುರದ ಜನಗಳು ಭಯದಿಂದ ತಲ್ಲಣಗೊಂಡಿದ್ದಾರೆ !

ಭಯ...... ಅತ್ಯಾಶ್ಚರ್ಯ !

ಅದರೊಂದಿಗೆ ಕುತೂಹಲ !

ಊರಿನಲ್ಲಿ ಸುದ್ದಿ ಹರಡಿತು!

ಜನಗಳು ಗುಂಪು, ಗುಂಪಾಗಿ ಈ ಭಯಾನಕ ದೃಶ್ಯವನ್ನು ನೋಡಲು ಅತ್ತ ಕಡೆ ನಡೆಯುತ್ತಿದ್ದಾರೆ !

ಅದು.... ಅದು..... ಮಹಾ ಹುತ್ತ !

ಅಲ್ಲಿಗೆ ಜನಗಳು ಹೋಗುತ್ತಿದ್ದಾರೆ !

ಮೈ ಜಲಭರಿಸುವ ಸನ್ನಿವೇಶ !

ರೇವತಿ ಮನೆಯ ಜಗುಲಿಯ ಮೇಲೆ ಕುಳಿತು ಅಜ್ಜಿ ಮತ್ತು ಶ್ರೀಕಂಠನ ಜೊತೆ ಮಾತಾಡುತ್ತಿದ್ದಳು.

ಎದುರುಗಡೆಯೇ ದೇವಸ್ಥಾನ !

ದೇವಸ್ಥಾನದ ಬಾಗಿಲನ್ನು ಹಾಕಿಕೊಂಡು ಯುವಕ ಪೂಜಾರಿ ಇವರ ಹತ್ತಿರ ಬಂದು "ನೀವ್ಯಾರು ಬರೊಲ್ಲವೇ"

"ಎಲ್ಲಿಗೆ?"

"ಹುತ್ತದ ಹತ್ತಿರ"

"ಈಗ್ಯಾಕೆ ಅಲ್ಲಿಗೆ?"

"ಅಂದರೆ ನಿಮಗೆ ಸುದ್ದಿ ತಿಳಿದಿಲ್ಲ"

ರೇವತಿ ಕುತೂಹಲದಿಂದ "ಏನು..... ಏನಾಗಿದೆ?"

ಪೂಜಾರಿ ಯುವಕ "ಇಪ್ಪತ್ತು ದಿನಗಳ ಹಿಂದೆ ಮೀನಳಿಗೆ ಆಗಿದ್ದೇ ಈಗ ಮತ್ತೊಂದು ವ್ಯಕ್ತಿ[illegible]ಗಿದೆ"

ಅಲ್ಲಿದ್ದವರೆಲ್ಲಾ ಬೆಚ್ಚಿಬಿದ್ದರು.

ಶ್ರೀಕಂಠ ಗಾಬರಿಯಿಂದ "ಅಂದರೆ.... ಅಂದರೆ....."

"ಸರ್ಪಗಳ ಸುತ್ತಾಟ !"

"ಮೈಗಾಡ್..." ಎಂದು ಉದ್ಗರಿಸಿದನು.

"ಬೇಗ ಬನ್ನಿ ಹೊರಡೋಣ"

ಶ್ರೀಕಂಠ, ರೇವತಿ ಮತ್ತು ದೇವಸ್ಥಾನದ ಪೂಜಾರಿ ಬಿರು ಬಿರನೆ ಅಲ್ಲಿಂದ ನಡೆಯಲಾರಂಭಿಸಿದರು.

"ಹಾವುಗಳು ಯಾರನ್ನು ಸುತ್ತಿಕೊಂಡಿದೆ!"

"ಒಬ್ಬ ಅರೆಹುಚ್ಚನನ್ನು"

ರೇವತಿ ಸಂದೇಹದಿಂದ ನೋಡಿದಳು.

ಶ್ರೀಕಂಠ "ಯಾರದು?"

"ಪ್ರಸನ್ನನ ಅಕ್ಕನ ಗಂಡ"

* * *

ಮೂರು ಹುತ್ತಗಳ ಸಂಗಮ !

ಅದನ್ನು ನೋಡುತ್ತಿದ್ದರೆ ಎಂತಹವರಿಗೆ ಸಹ ಭಯ ಉಂಟಾಗುತ್ತದೆ ! ಸನ್ನಿವೇಶ ಆ ರೀತಿ ಇದೆ !

ಹುತ್ತದಿಂದ ಹಾವುಗಳು ಬರುತ್ತಿವೆ !

ಸರಸರನೆ ಹರಿಯುತ್ತಿದೆ !

ದೇಹಕ್ಕೆ ಸುತ್ತಿಕೊಳ್ಳುತ್ತಿದೆ !

ಜನಗಳು ಏನಿದು ಬಿಗಿ ಹಿಡಿದು ಎದೆಯಲ್ಲಿ ತಳುಕು ಉಂಟು ಮಾಡುವ ಭಯಾನಕ ದೃಶ್ಯ ನೋಡುತ್ತಿದ್ದಾರೆ.

ಅಬ್ಬಬ್ಬಾ......!

ಮಂಜಯ್ಯ ನೆಲದ ಮೇಲೆ ಬಿದ್ದಿದ್ದಾನೆ. ಅವನ ದೇಹದ ಸಣ್ಣ ಅಂಗುಲ ಸಹ ಕಾಣದಂತೆ ಹಾವುಗಳು ಸುತ್ತಿಕೊಂಡಿದೆ !

ಹುತ್ತಗಳಿಂದ ಹಾವುಗಳು ಬರುತ್ತಿದೆ !

ಜನಗಳು ಭಯದಿಂದ ಸರಿಯುತ್ತಿದ್ದಾರೆ !

ರೇವತಿ, ಶ್ರೀಕಂಠ ಮತ್ತು ಪೂಜಾರಿ ನೋಡುತ್ತಿದ್ದಾರೆ. ರೇವತಿ ಈಗ ಅದನ್ನು ಕಲ್ಪಿಸಿಕೊಂಡಳು,

ಇಪ್ಪತ್ತು ದಿನಗಳ ಹಿಂದೆ ನಡೆದಿದ್ದು !

ಮೀನಳ ಸಾವು.......!

ಬಹುಶಃ ಮೀನ ಸಹ ಇದೇ ರೀತಿ ಸತ್ತಿದ್ದಾಳೆ. ಅಬ್ಬ.... ಸಾಯುವ ಕೊನೆಯ ಕ್ಷಣದವರೆಗೂ ಭಯಗೊಂಡಿರುತ್ತಾಳೆ !

ಅಬ್ಬ...... ಭಯಾನಕ ಸಾವು!

ಅದೇ ಸಮಯಕ್ಕೆ ಅಲ್ಲಿಗೆ ಜೀಪೊಂದು ತುಂಬಾ ವೇಗವಾಗಿ ಬಂದು ನಿಂತು ಕೊಂಡಿತು.

ಅದರಿಂದ ಇಬ್ಬರು ಇಳಿದರು

ಪ್ರಸನ್ನ ಮತ್ತು ಅರುಂಧತಿ !

ಅರುಂಧತಿ ಜೋರಾಗಿ ಅಳುತ್ತಲೇ ತನ್ನ ಸಹೋದರನನ್ನು ಬಿಗಿಯಾಗಿ ತಬ್ಬಿಕೊಂಡಳು ಪ್ರಸನ್ನ ಸಂತೈಸುತ್ತಿಲ್ಲ !

ಅಲ್ಲೇ ಇದ್ದ ರೇವತಿ ತಿರುಗಿದಳು

ಪ್ರಸನ್ನನ ಮುಖ ನೋಡಿದಳು

ಅವನ ಕಣ್ಣುಗಳು ಕೆಂಡದಂತೆ ಮುಖದಲ್ಲಿ ಅದೇನೋ ತೃಪ್ತಿ ಕಂಡು ಬರುತ್ತಿದೆ !

ರೇವತಿಗೆ ಸಂದೇಹ ಬರುತ್ತಿದೆ !

ಮೀನಳ ದೇಹಕ್ಕೆ ಈ ರೀತಿ ಸರ್ಪಗಳು ಸುತ್ತಿಕೊಳ್ಳಲು ಕಾರಣ ಪ್ರಸನ್ನ ! ಈಗಲೂ ಅವನ ಕೈವಾಡ ಇರಬಹುದೆ?

ಸಮಯ ಉರುಳುತ್ತಿತ್ತು !

ಈಗ ಅವನ ದೇಹಕ್ಕೆ ಸುತ್ತಿಕೊಂಡಿದ್ದ ಹಾವುಗಳು ಅಲ್ಲಿಂದ ಸರಸರನೆ ಹೋಗಲಾರಂಭಿಸಿತು !

ಹಾವುಗಳು ಹುತ್ತ ಸೇರುತ್ತಿದೆ !

ಇದೆಂತಹ ಮಾಂತ್ರಿಕ ಸನ್ನಿವೇಶ !

ರೇವತಿ ಈಗ ಹೆಣದ ಹತ್ತಿರ ಬಂದಳು. ಮಂಜಯ್ಯ ಅಂಗಾತ್ತನೆ ಬಿದ್ದಿದ್ದಾನೆ ರೇವತಿ ಚುರುಕಾಗಿ ನೋಡಿದಳು ವಿಷದ ಲಕ್ಷಣಗಳು ಮುಖದಲ್ಲಿ ಇಲ್ಲ !

ಇಂತಹ ವಿಷ ಸರ್ಪ ಕಚ್ಚಿದರೆ ಮುಖ ನೀಲಿ ಆಗಿರುತ್ತದೆ. ಬಾಯಿಂದ ನೊರೆ ಬರುತ್ತದೆ !

20ನೇ ಪುಟಕ್ಕೆ

ಇಲ್ಲಿಯುವರೆಗೆ.........

ಮಾವಿನ ತೋಪಿನಲ್ಲಿ ಪ್ರಸನ್ನನ ಅಕ್ಕ ಅರುಂಧತಿ ಮತ್ತು ಅವಳ ಗಂಡ ಸೇರುತ್ತಾರೆ. ಮಂಜಯ್ಯ ಹುಚ್ಚನಂತೆ ನಾಟಕ ಆಡುತ್ತಿರುತ್ತಾನೆ. ಇದು ಪ್ರಸನ್ನನಿಗೆ ತಿಳಿಯುತ್ತದೆ. ಕಾಡಿನಲ್ಲಿ ತಿರುಗುತ್ತಿದ್ದ ಮಂಜಯ್ಯನಿಗೆ ವ್ಯಕ್ತಿಯೊಂದು ಪ್ರಜ್ಞೆ ತಪ್ಪುವಂತೆ ಹೊಡೆಯುತ್ತದೆ. ಎತ್ತಿಕೊಂಡು ಹೋಗುತ್ತದೆ.

ಮುಂದೆ ಓದಿ..........



ಬೆಂಗಳೂರಿನ ಕಾವೇರಿ ನಾಡಿನಲ್ಲಿ ಶ್ರೀ ಅಮ್ಮಾಜೀರ ಪೊನ್ನಪ್ಪ ನಿರ್ಮಿತ ಕಾವೇರಿ ಗುಡ್ಡದ ದೃಶ್ಯ



ದಿನಾಂಕ 12-9-99ರಲ್ಲಿ ಬೆಂಗಳೂರಿನ ಕಾವೇರಿ ನಾಡಿನಲ್ಲಿ ಕೈಲ್ ಪೋಳ್ದ್ ಹಬ್ಬದ ಸಮಾರಂಭದಲ್ಲಿ ಶ್ರೀ ಗುಡ್ಡೆಮನೆ ರಮೇಶ್, ಗೌಡ ಅಕಾಡೆಮಿ ಉಪಾಧ್ಯಕ್ಷ ಮಡಿಕೇರಿ ಇವರು ಚಿಕ್ಕ ಮಗುವಿನಿಂದ ಜ್ಯೋತಿ ಬೆಳಗಿಸಿ ಉದ್ಘಾಟಿಸುತ್ತಿರುವುದು



ದಿನಾಂಕ 12-9-99ರಲ್ಲಿ ಬೆಂಗಳೂರಿನ ಕಾವೇರಿ ನಾಡಿನಲ್ಲಿ ಕೈಲ್ ಪೋಳ್ದ್ ಹಬ್ಬದಲ್ಲಿ ಕಾರ್ಯಕ್ರಮದ ಬಗ್ಗೆ ಉಡುದೋಳಿ ಸೋಮಪ್ಪನವರು ಮತ್ತು ಕಾಚಿಲಂಡ ಅಶೋಕ್‌ನವರು, ಕಾವೇರಿನಾಡಿನ ಸಂಸ್ಥಾಪಕ ಅಮ್ಮಾಜೀರ ಪೊನ್ನಪ್ಪನವರೊಡನೆ ಗಹನ ವಿಚಾರಲಿ ಚರ್ಚೆ.



ದಿನಾಂಕ 19-9-99ರಲ್ಲಿ ಹಾಸನದಲ್ಲಿ ನಡೆದ ಕೈಲ್ ಪೋಳ್ದ್ ಸಮಾರಂಭದ ಚಿತ್ರ. ಎಡದಿಂದ ಬಲಕ್ಕೆ ಕಾರ್ಯದರ್ಶಿ ಕಲ್ಲುಮುಟ್ಲು ಗಣೇಶ್‌ನವರು, ಅಧ್ಯಕ್ಷರಾದ ಶ್ರೀ ಕೈಬಿಲಿರ ಪೊನ್ನಣ್ಣನವರು, ಮುಖ್ಯ ಅತಿಥಿಗಳಾದ ಕಾವೇರಿ ನಾಡಿನ ಅಮ್ಮಾಜೀರ ಪೊನ್ನಪ್ಪನವರು ಹಾಗೂ ಕೊಡಗು ಸಂಗಾತಿ ಪತ್ರಿಕೆಯ ಗೌರವ ಸಂಪಾದಕ ಪಟ್ಟಡ ಪ್ರಭಾಕರನವರು.

# ಮರಳಿ ಗೂಡಿಗೆ

ಮಡಿಕೇರಿ ಬಸ್ ಸ್ಟ್ಯಾಂಡಿನಿಂದ ಬಸ್‌ಹೊರಟು 10ನಿಮಿಷಗಳು ಕಳೆದಿರಬಹುದು. ಕಿಟಕಿಯ ಪಕ್ಕದಲ್ಲಿ ಕುಳಿತಿದ್ದ ನಾನು ಮುಳುಗುವ ಸೂರ್ಯನ ಸೌಂದರ್ಯವನ್ನು ವೀಕ್ಷಿಸುತ್ತಿದ್ದೆ. ಆಕಾಶದಲ್ಲಿ ಕವಿಯುತ್ತಿದ್ದ ದಟ್ಟನೆಯ ಕಾರ್ಮೋಡಗಳ ಮಧ್ಯದಿಂದ ಚಿನ್ನದ ಬಣ್ಣದ ಕಿರಣಗಳು ಬೆಟ್ಟದ ತಪ್ಪಲಿನಲ್ಲಿ ಹರಿಯುತ್ತಿದ್ದ ಜನತೊರೆಗಳ ಮೇಲೆ ಫಳಫಳ ಹೊಳೆಯುತ್ತಿರುವ ನಕ್ಷತ್ರಗಳನ್ನು ಚೆಲ್ಲುತ್ತಿರಲು, ಮುಸ್ಸಂಜೆಯ ಮಂದ ಬೆಳಕಿನಲ್ಲಿ ಸುತ್ತಲಿನ ನಿಶ್ಚಲ ನಿಸರ್ಗ ಸೌಂಧರ್ಯ, ಬಿಡಿಸಿದ್ಧ ಚಿತ್ರದಂತಿತ್ತು. ಬಸ್ಸು ಸುತ್ತಿ ಸುತ್ತಿ ದಟ್ಟ ಹಸಿರಿಂದಾವೃತವಾದ ಭೂದೇವಿಯ ಮಡಿಲಿಗೆ ಇಳಿದು ಹೋಗುವಂತೆ ಬಾಸವಾಗುತ್ತಿರಲು ಕತ್ತಲಾದೊಡನೆ ಗೂಡಿಗೆ ಮರಳುವ ಹಕ್ಕಿಯ ಹಾಗೆ ನಾನು ಹುಟ್ಟಿದ ನಾಡಿಗೆ ಅನೇಕ ವರ್ಷಗಳ ನಂತರ ಬರುತ್ತಿದ್ದರೂ, ಮೊನ್ನೆ ತಾನೇ ಬಂದು ಹೋಗಿರುವಂತೆ ಅನ್ನಿಸುತ್ತಿತ್ತು.

"**ಕೊಡಗು**" ವನಸಿರಿಸಂಪತ್ಭರಿತ ನಾಡು. ಶ್ರೀ ಕೃಷ್ಣನ ಅಣ್ಣನಾದ ಬಲರಾಮನು 21ಕ್ಷತ್ರಿಯ ವಂಶವನ್ನು ತನ್ನ ಆಯುಧವಾದ ಕೊಡಲಿಯಿಂದ ನಾಶಮಾಡಿ, ಬಳಿಕ ಶಾಂತಗೊಂಡು ತನ್ನ ಕೊಡಲಿಯನ್ನು ಬೀಸಿ ಒಗೆದ ಜಾಗವೇ 'ಮಲೆನಾಡು' ಎಂದು ಪ್ರತೀತಿ. ಈ ಕಾರಣದಿಂದಲೇ ನಮ್ಮ ನಾಡಿನಲ್ಲಿ ಮೆಣಸು, ಸಂಬಾರ ಪದಾರ್ಥಗಳು ಹೇರಳವಾಗಿ ಸಿಗುತ್ತವೆ, ಎಂದು ಹಿಂದೆಯೇ ಓದಿದ ನೆನಪು.

'**ಕೊಡಗು**' ಈ ಶಬ್ದವನ್ನು ನೆನೆದರೆ ಸಾಕು ನನ್ನ ಹೃದಯ ತುಂಬಿ ಬಂದು ಮನಸ್ಸಿನಾಳದಿಂದ ಒಂದೊಂದೇ ಬಾಲ್ಯದ ನೆನಪುಗಳು ಹೃದಯಸಾಗರಕ್ಕೆ ಅಪ್ಪಳಿಸಲಾರಂಬಿಸುತ್ತವೆ. ಸಣ್ಣವನಾಗಿದ್ದಾಗ, ಜಡಿಮಳೆಯಿಂದ ನೆನೆದ ಹಸಿರು ಹುಲ್ಲಿನ ಮೇಲೆ ಓಡುತ್ತಿದ್ದ ನೆನಪು; ಅಮ್ಮ ಕೊಟ್ಟ ಬಿಸಿಬಿಸಿ ಅಕ್ಕಿರೊಟ್ಟಿ-ಮೊಟ್ಟೆ ಪಜ್ಜಿಯ ಬುತ್ತಿಯನ್ನು ಚೀಲದಲ್ಲಿ ತುರುಕಿಕೊಂಡು ರಂಗಿನ ಕೊಡೆ ಹಿಡಿದು ನಮ್ಮ ನಾಯಿ ಸೀಸರ್‌ನೊಂದಿಗೆ ಮಳೆಯಲ್ಲಿ ಶಾಲೆಗೆ ನಡೆದುಹೋಗುತ್ತಿದ್ದ ನೆನಪು; ಬಾಳೆಗಿಡದ ಮೇಲೆ ಪಟರ್-ಪಟರ್ ಸದ್ದು ಮಾಡುತ್ತಾ 3-4 ದಿನಗಳಾದರೂ ಬಿಡದೆ ಹೊಡೆಯುತ್ತಿದ್ದ ಜಿನುಗು ಮಳೆಯ ನೆನಪು; ಮನೆಯಿಂದ ತುಸು ದೂರದಲ್ಲಿ ತುಂಬಿ ಹರಿಯುತ್ತಿದ್ದ ಕಿರುಹೊಳೆಯಲ್ಲಿ ನಾನೂ ನನ್ನ ತಂಗಿ ಕಾಗದದ ದೋಣಿ ಮಾಡಿ ಬಿಡುತ್ತಿದ್ದ ನೆನಪು.

ಕಾಲಚಕ್ರ ಉರುಳುತ್ತಿದ್ದಂತೆ ಒದಲಾವಣೆಗಳಾಗುವುದು ಅನಿವಾರ್ಯ. ಬಸ್ಸಿನಿಂದಿಳಿದ ನಾನು ಸುತ್ತಲೂ ಕಣ್ಣು ಹಾಯಿಸಿದೆ. ನಮ್ಮೂರಿನಲ್ಲೂ ಸಾಕಷ್ಟು ಬದಲಾವಣೆಗಳಾಗಿಬಿಟ್ಟಿವೆ. ಮುಂಚೆ ಇದ್ದ ದಟ್ಟವಾದ ಆಕಾಶದೆತ್ತರಕ್ಕೆ ಬೆಳೆದ ಗಿಡಮರಗಳೆಲ್ಲಾ ಈಗ ನಾಪತ್ತೆಯಾಗಿವೆ. ಗಿಡಮರಗಳ ಸಂದಿಯಿಂದ ಇಣುಕಿಕೊಂಡಿರುತ್ತಿದ್ದ ಹೊಗೆಯುಗುಳುವ ಚಿಮಣಿಗಳ ಹೆಂಚಿನಮನೆಗಳಿದ್ದ ಜಾಗದಲ್ಲಿ ವಿಶಾಲವಾದ ಕಾಂಕ್ರೀಟ್ ಕಾಡಿನಲ್ಲಿ ಕಾಣಸಿಗುವ ಮೌಲ್ಡ್ ಮನೆಗಳು ಬೆಳೆದಿವೆ.

ಅಂದು ರಾತ್ರಿ ನಿದ್ರೆ ಬರದೆ ಮಗ್ಗಲು ಬದಲಾಯಿಸುತ್ತಾ ಬಾಲ್ಯದಲ್ಲಿ ನನ್ನ ಕಿವಿಗಳಿಗೆ ಚಿರಪರಿಚಿತವಾಗಿದ್ದ ಜುಳು ಜುಳು ಹರಿವ ನೀರಿನ ಕಲರವ ಹಾಗೂ ಜೀರುಂಡೆಯ ಗುಂಯ್‌ಗುಡುವ ನಾದಕ್ಕಾಗಿ ಆಲಿಸಿದೆ. ಆದರೆ ನನಗೆ ಕೇಳಿಬಂದದ್ದು ಬರೀ ವಾಹನಗಳ ಭೋರ್ಗರೆವ ಕರ್ಕಶವಾದ ಧ್ವನಿ ಮಾತ್ರ.

ಬೆಳಗಿನ ಜಾವ ನನ್ನ ಕಣ್ಣಮುಂದಿನ ದೃಶ್ಯ ನನಗೆ ಮತ್ತಷ್ಟು ನಿರಾಶೆಯನ್ನುಂಟುಮಾಡಿತು. ಕೆಲವೇ ವರ್ಷಗಳ ಹಿಂದೆ ತುಂಬಿ ತುಳುಕುತ್ತಾ ಹರಿಯುತ್ತಿದ್ದ ಹೊಳೆ ಈಗಿರಲಿಲ್ಲ. ಆಗ ಕುಲುಕುತ್ತಾ ಬಳುಕುತ್ತಾ ಹರಿಯುತ್ತಿದ್ದ ಕನ್ನಡಿಯ ಹಾಗೆ ಕೋರೈಸುತ್ತಿದ್ದ ಶುದ್ಧ ನೀರಿನ ಬದಲಾಗಿ ಈಗ ಬತ್ತಿಹೋಗಿ ನಿದಾನವಾಗಿ ಹರಿಯುತ್ತಿದ್ದ ಕೆಸರು ನೀರು ಇತ್ತು. ನೀರಿನೊಳಗೆ ಬೆಳ್ಳಿ ಚಿಟ್ಟೆಗಳಂತೆ ಮಿಂಚುತ್ತಾ ಈಜುತ್ತಿದ್ದ ಮೀನುಗಳಿಗಾಗಿ ನನ್ನ ಕಣ್ಣುಗಳು ಹುಡುಕಾಡಿ ಸೋತವು. ಅದರ ಬದಲಾಗಿ ಬಿಳಿಚಿಕೊಂಡು ಉಸಿರಾಡಲು ಒದ್ದಾಡುತ್ತಾ ತೆವಳುತ್ತಾ ಚಲಿಸುತ್ತಿದ್ದ ಪುಟ್ಟ ಮೀನು ಕಣ್ಣಿಗೆ ಬಿದ್ದು ಕರುಳು ಚುರ್ ಎಂದಿತು.

ಹಸಿರು ಹೊದಿಕೆಯಿಂದಾವೃತವಾದ ಸ್ವರ್ಗದಂತಿದ್ದ ನಿಸರ್ಗಧಾಮ ಮಾನವನ ತುಳಿತಕ್ಕೆ ಸಿಕ್ಕಿ ನಿಧಾನವಾಗಿ ಸಾಯುತ್ತಿರುವುದನ್ನು ಕಣ್ಣಾರೆಕಂಡು ಪಿಚ್ಚೆನಿಸುತು. ಒಂದು ಕಾಲದಲ್ಲಿ ದೊಡ್ಡ ದೊಡ್ಡ ಜಾತಿ ಮೀನುಗಳು ಹೇರಳವಾಗದ್ದ ನದಿಯಲ್ಲಿ ಈಗ ಸಣ್ಣಪುಟ್ಟ ಅಳಿದುಳಿದ ಮೀನುಗಳು ಸಾವು ಬದುಕಿನ ಮಧ್ಯೆ ಹೋರಾಟ ನಡೆಸಿವೆ. ಇದಕ್ಕೆ ಕಾರಣ ಮಾನವನ ಆಸೆ. ಮೀನಿಗಾಗಿ ಇಲ್ಲಿನ ಕೆಲವು ಜನ ನೀರಿಗೆ ಸಿಡಿಮದ್ದು ಹಾಗು ANTRINE ಮುಂತಾದ ವಿನಾಶಕಾರಿ ಕೆಮಿಕಲ್ಸ್‌ನ ಪ್ರಯೋಗ ಮಾಡುವುದು. ಇದು ಮಾತ್ರವಲ್ಲ ನಂಜು ತುಂಬಿದ ಬೇಪರ್ ಬೀಜ, ಸಣ್ಣ ಮೆಣಸು, ಚಿಮಿರಿಕಬ್ಬು, ಬಳ್ಳಿಯನ್ನು ಚೆನ್ನಾಗಿ ಅರೆದು ನೀರಿಗೆ ಕಲಕಿ ಮೀನು ಮಾತ್ರವಲ್ಲ, ಇನ್ನೂ ಅನೇಕ ಜಲಚರಗಳು ಸಾಯುವಂತೆ ಮಾಡುತ್ತಾರೆ. ಹೀಗೆ ಮಾಡುವುದು ಕಾನೂನುಬಾಹಿರವೆಂದು ತಿಳಿದಿದ್ದರೂ ಕೂಡ ಮತ್ತೆ ಮತ್ತೆ ತಾನು ಕುಡಿಯುವ ನೀರಿಗೆ ತಾನೆ ಮದ್ದು ಹಾಕಿ ಅದನ್ನು ಕಲ್ಮಶವನ್ನಾಗಿಸುತ್ತಾನೆ.

ಮಾನವನನ್ನು ಕಾಡುವ 90% ಕಾಯಿಲೆಗಳಿಗೆ ನೀರೆ ಕಾರಣ. ಆದ್ದರಿಂದ ನಾವು ಕುಡಿಯುವ ನೀರನ್ನು ಆದಷ್ಟು ಶುದ್ಧವಾಗಿಟ್ಟು ಕೊಳ್ಳಬೇಕು.

**ಚೆಡಗಿನ ವೈಯಾರಿ-ಕೊಡಗಿನ ಕಾವೇರಿಯನ್ನು ಈ ರೀತಿ ನಶಿಸಿಹೋಗಲು ನಾವು ಬಿಡಬಾರದು. ಕಾಲಚಕ್ರಕ್ಕೆ ಕಡಿವಾಣ ಹಾಕುವುದು ಸಾಧ್ಯ. ಇನ್ನು ಮುಂದೆಯಾದರೂ ನಮ್ಮ ಜನಾಂಗದವರು ಕೊಡಗಿನ ಅಳಿದುಳಿದ ವನ್ಯ ಸಂಪತ್ತನ್ನು ಸುರಕ್ಷಿತವಾಗಿಡುವ ಪಣತೊಡಬೇಕು.**

ನೀರಿನಲ್ಲಿ ಒದ್ದಾಡುತ್ತಿದ್ದ ಪುಟ್ಟ ಮೀನಿನ ಚಿತ್ರ ನನ್ನ ಕಣ್ಣನ್ನು ಮಂದು ಮಾಡಿದ್ದರೂ ಕೂಡ, ನನ್ನ ಹೃದಯಾಂತರಾಳದಲ್ಲಿ ಹುದುಗಿದ್ದ ಬಾಲ್ಯದ ನೆನಪುಗಳು ಮಾತ್ರ ಇಂದಿಗೂ ಹಚ್ಚಹಸಿರಾಗಿಯೇ ಉಳಿದಿದೆ.

ಎಡಿಕೇರಿ ಸುದರ್ಶನ್, ಬೆಂಗಳೂರು





ದಿ. ಪೇರಿಯನ ಕಿಶೋರ್ ಕುಮಾರ್
ಜನನ : 28-11-1977 ಮರಣ : 6-10-1997

## ಸವಿ ನೆನಪು

ಅರಳುವ ಮುನ್ನವೇ ಬಾಡಿಹೋದ ನಿನ್ನ ಬಾಳಿನ ಸವಿನೆನಪು ನಮ್ಮ ಹೃದಯಾಂತರಾಳದಲ್ಲಿ ಹಚ್ಚ ಹಸಿರಾಗಿಯೇ ಉಳಿದಿದೆ. ಪರಮಾತ್ಮನು ನಿನ್ನ ಆತ್ಮಕ್ಕೆ ಚಿರಕಾಲ ಶಾಂತಿಯನ್ನು ನೀಡಲಿ ಎಂದು ಹಾರೈಸುವ

ನಿನ್ನ ಪಪ್ಪ : ಪೇರಿಯನ ಕುಶಾಲಪ್ಪ ಅಮ್ಮ : ಪುಷ್ಪಾವತಿ
ಅಣ್ಣಂದಿರು : ಪ್ರಕಾಶ ಉದಯ, ಚೆಟ್ಟಳ್ಳಿ
ಅಕ್ಕ ಭಾವ : ಮುಂಞಂಡ್ರ ಅನಿತಾ ಜಯಕುಮಾರ್

---



ದಿ. ಶ್ರೀ ಮಾವೋಜಿ ಜನಾರ್ಧನ,
ಮಾಜಿ ಅಡ್ವೋಕೇಟ್ ಜನರಲ್, ಕರ್ನಾಟಕ ಸರ್ಕಾರ
ಜನನ : 24-6-1930 ಮರಣ : 12-10-1997

## ದ್ವಿತೀಯ ವರ್ಷದ ಪುಣ್ಯಸ್ಮರಣೆ

ನೀವು ನಮ್ಮನ್ನು ಅಗಲಿ ಇಂದಿಗೆ ಎರಡು ವರ್ಷಗಳೇ ಸಂದರೂ ಸದಾ ನಿಮ್ಮ ನೆನಪಿನಲ್ಲಿರುವ ನಾವು ನೀವು ಹಾಕಿ ಕೊಟ್ಟ ದಾರಿದೀಪ ನಮಗೆಲ್ಲಾ ಮಾದರಿಯಾಗಿದೆ. ನಿಮ್ಮ ದಿವ್ಯಾತ್ಮಕ್ಕೆ ಪರಮಾತ್ಮನು ಚಿರಶಾಂತಿಯನ್ನು ಅನುದಿನವೂ ನೀಡಲಿ ಎಂದು ಪ್ರಾರ್ಥಿಸುವ

ಪತ್ನಿ : ಲಲಿತ ಜನಾರ್ಧನ
ಮಗ : ಯೋಗೇಂದ್ರ ವಿಕ್ರಮ್, ಸೊಸೆ : ರೂಪ
ಮೊಮ್ಮಕ್ಕಳು : ಅನಿರುದ್ಧ್ ಮತ್ತು ಮಾವೋಜಿ ಕುಟುಂಬಸ್ಥರು

---



ದಿ. ಕುಂಭಗೌಡನ ರಾಮಪ್ಪ
ಜನನ : 21-12-1926 ಮರಣ : 29-10-1998

## ಶ್ರದ್ಧಾಂಜಲಿ

ಸರ್ಕಾರಿ ಖಜಾನೆ ಮಡಿಕೇರಿಯಲ್ಲಿ ನಲವತ್ತನಾಲ್ಕು ವರ್ಷಗಳ ಅಮೋಘ ಸೇವೆ ಸಲ್ಲಿಸಿ ನಿವೃತ್ತಿಯಾಗಿ ನಂತರ ಮಡಿಕೇರಿಯ ಈಸ್ಟ್ ಅಂಡ್ ಪೆಟ್ರೋಲ್ ಬಂಕ್‌ನಲ್ಲಿ ಹದಿನಾರು ವರ್ಷಗಳ ಪ್ರಾಮಾಣಿಕ ಸೇವೆ ಸಲ್ಲಿಸಿ ದಿನಾಂಕ 29-10-1998ರಲ್ಲಿ ನೀವು ವೈಕುಂಠವಾಸಿಯಾದಿರಿ. ನೀವು ಹಾಕಿ ಕೊಟ್ಟ ದಾರಿ ದೀಪ ನಮಗೆಲ್ಲಾ ಮಾದರಿಯಾಗಿದೆ. ನಿಮ್ಮ ಆತ್ಮಕ್ಕೆ ಪರಮಾತ್ಮನು ಚಿರಶಾಂತಿಯನ್ನು ಅನುದಿನವೂ ನೀಡಲಿ ಎಂದು ಪ್ರಾರ್ಥಿಸುವೆವು.

ಪತ್ನಿ : ಶ್ರೀಮತಿ ಬೇಬಿ
ಮಗ : ಸತೀಶ್ ಮತ್ತು ಕುಟುಂಬಸ್ಥರು

---

## ನಗೆಹನಿ

ಒಮ್ಮೆ ಗುಂಡನಿಗೆ ಬೆಳಿಗ್ಗೆ ಬೇಗನೆ ಎದ್ದು ಎಲ್ಲಿಗೋ ಹೋಗಬೇಕಿತ್ತು. ಮನೆಯಲ್ಲಿದ್ದ ಒಂದೇ ಒಂದು ಅಲಾರಾಂ ಟೈಮ್‌ಪೀಸ್ ಹಾಳಾಗಿತ್ತು. ಹೆಂಡತಿ ಗುಂಡಮ್ಮನೊಂದಿಗೆ ಗುಂಡ ಜಗಳವಾಗಿ ಮಾತುಬಿಟ್ಟು ಎರಡು ದಿನವಾಗಿತ್ತು. ಏನೂ ಮಾಡಲು ತೋಚದೆ ಗುಂಡ ಒಂದು ಚೀಟಿಯಲ್ಲಿ ಗುಂಡಮ್ಮ ನಾಳೆ ಬೆಳಿಗ್ಗೆ ಐದು ಗಂಟೆಗೆ ನನ್ನನ್ನು ಎಬ್ಬಿಸು ಎಂದು ಬರೆದು ಹೆಂಡತಿಯ ಕಣ್ಣಿಗೆ ಬೀಳುವಂತಿಟ್ಟ.

ಮರುದಿನ ಮುಂಜಾನೆ ಗುಂಡ ಕಣ್ಣು ಬಿಟ್ಟಾಗ ಆಗಲೆ ಗಂಟೆ ಎಂಟಾಗಿತ್ತು. ಗುಂಡ ತಡಬಡಿಸಿ ಎದ್ದು ತಾನು ಬರೆದ ಚೀಟಿ ತನ್ನ ಹೆಂಡತಿಗೆ ಸಿಕ್ಕಿದೆಯೋ ಇಲ್ಲವೋ ಎಂಬುದನ್ನು ನೋಡಲು ಹೋದಾಗ ಅವನಿಟ್ಟ ಚೀಟಿಯ ಹತ್ತಿರ ಗುಂಡಮ್ಮ ಮತ್ತೊಂದು ಚೀಟಿ ಇಟ್ಟಿದ್ದಳು. ಅದರಲ್ಲಿ ಬೇಗನೆ ಏಳಿ ಈಗ ಗಂಟೆ ಐದಾಗಿದೆ ಎಂದು ಬರೆದಿತ್ತು.

ಕೆ. ಎಸ್. ಪುರುಷೋತಮ
ಕಾಂತಬೈಲು ಚೆಂಬು, ಮಡಿಕೇರಿ

# ಕರಿಚಿನ್ನ -ಧಾರಾವಾಹಿ-33

ಮೂಲಕಥೆ : ಅಶ್ವಥಿ ಅರವಿಂದ್

[ಅರೆಭಾಷೆಗೆ] : ಎಂ. ಇ. ಮಹಮ್ಮದ್

ಅಡ್ವೋಕೇಟ್ ರತೀಶ್‌ನ ಮನೆ ಕಾಂಪೌಂಡ್ ಗೋಡೆ ಹಾರಿ ಒಳ ನುಗ್ಗಿದ ಚಂಗುಮಣಿ ಗೇನ ಮಾಡ್ತ್

ತನ್ನ ತಂಗೆ ನೀಲುನ ಇದೇ ಮನೆಯ ಒಳಗೆ ಕೆಡ್ಸಿ ಬುಟ್ಟ್‌ಕೊಂದಿರ್‌ದು. ನನ್ನ ನೀಲು ಪ್ರಾಣ ಸಂಕಟಲಿ ಯಾರ್ ಯಾರ್‌ನೆಲ್ಲ ಕರ್‌ದುಟ್ಟೋಏನೊ? ಅವ್ಳು ಅವರ ಕಾಲೇ ಹಿಡ್‌ದ್ ಬೇಡಿರಕೂ ಸಾಕ್

ತನ್ನ ಕೈಲಿದ್ದ ದಪ್ಪದ ರೂಲರ್‌ನ ಅಂವ ಮೆಲ್ಲೆ ತನ್ನ ಶರ್ಟ್ ಒಳಗೆ ಬೆನ್ನಿಗೆ ಸಿಗಿಸಿಬುಟ್ಟ್ ಒಳಗೆ ನಡ್ತ್. ಬಾಗಿಲ್ ಹಾಕಿ ಚಿಲಕನೂ ಸಿಗಿಸ್ತ್. ಬಾಗಿಲ್ ಹಾಕಿದ ಸದ್ದ್ ಕೇಳಿ ಒಳಗಿದ್ದ ಮೂರ್ ಜನಾನೂ ಒಮ್ಮೆಗೆ ಬೆಚ್ಚಿ ಹೆದ್ರಿ ಹೋದೋ.

ಈಗ ಎಂತ ನಡ್‌ದದೆಯೋ ಏನೋಂತ ಗೇನ ಮಾಡಿಕಂಡ್ ಇರ್‌ಕಾಕನ ಚಂಗುಮಣಿ ತನ್ನ ಬೆನ್ನ ಹಿಂದೆ ಸಿಗಿಸಿಟ್ಟಿದ್ದ ರೂಲರ್‌ನ ತಕಂಡ್ ಬೀಸ್‌ತಾ ಅವರ ಮಧ್ಯಕ್ಕೆ ನಡ್‌ತ್ ಸುರುಲಿ ಏಟ್‌ನ ಸುರಿಮಳೆ ಎಸ್. ಐ. ರಾಮಮೂರ್ತಿದ್ ತಲೆಗೆ ಬೀತ್.

ಒಂದ್ ಸಿಡ್ಲ್‌ನಂಗೆ ಅದ್ ನಡ್‌ತ್.

"ಒಬ್ಬರು ಕೂಡ ಅಲ್ಲಾಡಿಕೆ ಬೊತ್ತ್"

ಚಂಗುಮಣಿ ಹರ್‌ತ್ತದ ಚಾಕ್ ಹಿಡ್‌ದ್ ತೋರಿಸ್ತಾ ಹೇಳ್‌ತ್ ತಪ್ಪಿಸ್ ಕಣಕ್ಕೆ ಪ್ರಯತ್ನ ಪಡ್‌ತಿದ್ದ ಎಸ್. ಐ. ರಾಮಮೂರ್ತಿನ ದುಂಡ್‌ನ ಹಪ್ಪಳ ಆಗೋ ಹಂಗೆ ಚಂಗುಮಣಿ ಅವನ ಹೊಡ್‌ದ್ ಬೀಳ್ಸಿತ್. ಅವನ ಕಾಲ್‌ಗೆ ರೂಲರ್‌ಂದ ಹೊಡೀತ ಕೇಳ್‌ತ್.

"ಎಷ್ಟ್ ನಿರಪರಾಧಿಗಳಿಗೆ ಒದ್ದ ಕಾಲ್ ಮಾರಾಯ ಇದ್ ಚಂಗುಮಣಿ ಎಸ್. ಐ. ರಾಮಮೂರ್ತಿನ ಕೈ ಕಾಲ್‌ಗಳನ್ನ ಹೊಡ್‌ದ್. ಮುರಿತ್" ಎಷ್ಟ್ ಪಾಪದ ಜನಗಳ್‌ನ ಹೊಡ್‌ದ ಕೈ ಮಾರಾಯ ಇದ್, ಇದ್ ಇನ್ನ್ ಇರ್‌ಕೆ ಆಗದ್.

ಅಷ್ಟ್ರಲ್ಲಿ ಪಕ್ಕಲಿ ಕುದ್ದಿದ್ದ ಅಡ್ವೋಕೇಟ್ ರತೀಶ್ ಎದ್ದ್ ಹೊರಗೆ ಓಡಿಕೆ ನೋಡ್‌ಕಾಕನ ಚಂಗುಮಣಿ ಹೇಳ್‌ತ್. "ಲಾಯರ್, ಸಾರ್ ಇಷ್ಟ್ ಅರ್ಜೆಂಟ್‌ಲಿ ಎಲ್ಲಿಗೆ ಹೊರಟೊಳರಿ? ಲಾಯರ್ ಆಫೀಸ್‌ಗಾ, ಅಲ್ಲಾ ಕೋರ್ಟ್‌ಗಾ... ಕಳ್ಳ ಸೂ ಮಂಜ್ಞ, ಇನ್ನ್ ಮುಂದೆ ನೀನ್ ಯಾರ ಪರವಾಗಿಯೂ ಯಾವ ಕೋರ್ಟ್‌ಲೂ ಸುಳ್ಳು ಹೇಳುವಂಗಿಲ್ಲೆ".

ಚಂಗುಮಣಿ ಅಡ್ವೋಕೇಟ್ ರತೀಶ್‌ನ ಎದೆ ಮೇಲೆ ಹತ್ತಿಕುದ್ದ್‌ಕಂಡ್ ಅವ್ನ ಬಾಯಿಗೆ ಚಾಕ್‌ನ ಹಾಕಿತ್. ರಕ್ತ ಪೈಪ್‌ಲಿ ನೀರ್ ಹರ್‌ದಂಗೆ ಹರ್‌ತ್.

"ಎಷ್ಟೋಂದು ನಿರಪರಾಧಿಗಳ ವಿರುದ್ಧ ಸುಳ್ಳ್‌ವಾದ ಮಾಡಿ ಶಿಕ್ಷೆ ಕೊಡ್ಸಿದಂವ ನೀನ್, ಬೋಳಿಮಂಜ್ಞ, ಎಷ್ಟೋಂದು ಅಪರಾಧಿಗಳನ್ನ ಸುಳ್ಳುವಾದ ಮಾಡಿ ಬುಡ್‌ಗಡೆ ಮಾಡ್ಸಿದ ನಾಲಗೆ ನಿಂದ್. ಈ ನಾಲಗೆ ನಿಂಗೆ ಬೇಡ ಆತಾ. ನಂಗೆ ಬೇಕ್ ನಂಗೆ ನಿನ್ನ ನಾಲಗೆ ಮಾತ್ರ ಸಾಕ್"

ಅಂವ ಅಡ್ವೋಕೇಟ್ ರತೀಶ್‌ನ ನಾಲಗೇನ ತುಂಡು ಮಾಡ್‌ಕಾಕನ ರತಿಶ್ ಸೊಯೆ ತಪ್ಪಿ ಬಿದ್ದ್‌ಹೋತ್. ನಾಲಗೆನ ತುಂಡುಮಾಡಿ ಚಂಗುಮಣಿ ಹೇಳ್ತ್.

"ಈ ನಾಲಗೆ ತುಂಡ್‌ನ ಇಲ್ಲಿ ಹಾಕಿ ಹೋದರೆ ನೀನ್ ಡಾಕ್ಟರ್‌ಗೆ ಹೇಳಿ ಪುನಃ ಇದ್ನ ಹೊಲ್ಸಿಕೂ ಸಾಕ್. ಹಂಗಾಗಿ ಯಾವುದಾದರ್ ನಾಯಿಗೆ ಹಾಕುದು ಒಳ್ಳೆದ್".

ಚಂಗುಮಣಿ ರಾಜಕೀಯ ನಾಯಕನಸ ಬುಟ್ಟಿತ್‌ಲೆ.

"ನ್ನ ಮಾತ್ರ ಕೊಲ್ಲ್‌ಬ್ಯಾಡ ಈ ಊರ್‌ನ ಆಡಳಿತ ಪಕ್ಷದ ಮುಖಂಡನಾಗಿಯೊಳೆನಾನ್. ದಮ್ಮಯ್ಯ ಚಂಗುಮಣಿ ಬುಟ್ಟ್‌ಬುಡ್."

"ಲೋಫರ್ ರಾಜಕಾರಣಿ ಸೂ... ಮಂಜ ನನ್ನ ತಂಗೆ ಕೂಡ ಅಂದ್ ನಿನ್ನ ಮುಂದೆ ಹಿಂಗೆ ಕೈ ಜೋಡ್ಸಿ ಬೇಡಿರ್‌ದು. ಆದರೆ ಆಡಳಿತ ಪಕ್ಷದ ಮುಖಂಡನಾಗಿ ನೀನ್ ಅವಳ್‌ನ ಬುಟ್ಟಿತ್‌ಲೆಲ್ಲಾ"? ಚಂಗುಮಣಿದ್ ಕೈಲಿದ್ದ ಚಾಕ್ ರಾಜಕಾರಣಿನ ಎದೆ ಗುಂಡಿಗೆಗೆ ನುಗ್ಗಿತ್.

* * *

ಬೋರ್ ಗುಡ್ಡೆ ದೇವಯ್ಯ ಮನೆಗೆ ಬಾಕನ ರಸ್ತೆಲಿ ಮೊಣ್ಣಯ್ಯ ಬಿದ್ದಿತ್ತ್. ಅವನ ಮಡಿಕೇರಿ ಆಸ್ಪತ್ರೆಗೆ ಸಾಗ್ಸಿ ಅಡ್‌ಮಿಟ್ ಮಾಡ್ಸಿ ಮನೆಗೆ ಬಂದ ದೇವಯ್ಯ ಪೋಲಿಸ್‌ಗೆ ಪೋನ್ ಮಾಡಿ ಚಂಗುಮಣಿಯೇ ಮೊಣ್ಣಯ್ಯನ ಹೊಡ್‌ದ್ ಬೀಳ್ಸಿದ್‌ತ ಹೇಳ್‌ತ್.

ಮನೆದ್ ಎಲ್ಲ ಕೋಂಬರೆಗಳ್ನ ಲಾಯ್ಕಾಗಿ ಪರಿಶೀಲಿಸಿದ ಬಳಿಕ ಅಂವ ತನ್ನ ಬೆಡ್‌ರೂಂಗೆ ಬಾತ್. ರಿವಾಲ್ವರ್ ಲೋಡ್ ಮಾಡಿ ಹಾಸಿಗೆ ಅಡಿಲಿ ಮೊಡ್ಗಿತ್.

ಅಲ್ಲಿಂದ ಅಂವ ಫ್ರಿಡ್ಜ್‌ನ ಒಳಗಿಂದ ಬ್ರಾಂಡಿನ ಹೊರಗೆ ತೆಗೆತ್ತ್ ಅಷ್ಟರಲಿ ಹಿಂದೆಂದ ಒಂದ್ ಸದ್ದ್ ಆದಂಗೆ ಕೇಳ್‌ತ್ ದೇವಯ್ಯ ತಿರ್ಗಿ ನೋಡ್‌ತ್.

"ಎಲ್ಲ ಸೆರಿ ಉಟ್ಟಾತ ನೋಡ್‌ದಾ ಸಾಹುಕಾರ?"

ಚಂಗುಮಣಿ ಕೇಳ್‌ತ್. ದೇವಯ್ಯ ಒಮ್ಮೆಗೆ ಹೆದ್ರಿ ಮೈಯೆಲ್ಲಾ ಜುಂ ತೇಳಿ ರೋಮ ಎಲ್ಲಾ ನೆಟ್ಟಾಗಾತ್.

"ನೀನೇ... ನೀನ್ ಇಲ್ಲಿ.... ಇಲ್ಲಿ

ದೇವಯ್ಯಂಗೆ ಮಾತೇ ಹೊರಡದೇ ಹೋತ್.

"ಹೌದ್ ಸಾಹುಕಾರ ನಾನೇ ಚಂಗುಮಣಿ. ಇಂವ ಹೆಂಗೆ ಇಲ್ಲಿಗೆ ಬಾತ್‌ತ ಗೇನ ಮಾಡ್ತಾ ಒಳಾ ನೀನ್? ಈ ನಿನ್ನ ಕೋಂಬರೆ ರಾಕ್ಷಸರ ಕ್ವಾಟೆಯೇನ್ ಅಲ್ಲಲ್ಲ ಮರಾಯ?"

ದೇವಯ್ಯಂಗೆ ಈಗ ಏನ್ ಮಾಡಕೂಂತಲೇ ಗೊತ್ತಾಗದೇ ಹೋತ್. ಹಾಸಿಗೆ ಅಡಿಲಿ ರಿವಾಲ್ವರ್ ಉಟ್ಟು. ಪೋಲಿಸ್‌ಗೆ ಹೇಳಿಕೆ ಪೋನ್ ಕೂಡ ಉಟ್ಟು. ಇನ್ನ್ ಯಾಕೆ ನಾನ್ ಹೆದ್ರೊಕು? ಅಂವ ಗೇನ ಮಾಡ್‌ತ್. "ಮೊಣ್ಣಯ್ಯಂಗೆ ಹೊಡ್‌ದ್ ರಸ್ತೇಲಿ ಹಾಕಿ ಬಂದದ್ ನೀನೆ ಅಲ್ಲ ಮಾರಾಯ?" ದೇವಯ್ಯ ಕೇಳೇತ್.

ಮೊಣ್ಣಯ್ಯನ ಮಾತ್ರ ಅಲ್ಲ, ನಿನ್ನ ಲಾಯರ್‌ನ, ನಿನ್ನ ಎಸ್.ಐ. ನ ಮಲ್ಗಿಸಿ ಬಂದೊಳೆ ನಿನ್ನ ರಾಜಕಾರಣಿನ ಯಮ ಲೋಕಕ್ಕೆ ಕಳ್ಸಿಯೊಳೆ.

ಅವನ ಮಾತ್ ಕೇಳಿ ದೇವಯ್ಯ ಒಮ್ಮೆ ಸಣ್ಣಗೆ ನಡ್‌ಗಿತ್ತ್. ಆದರೂ ಅವನ ಮುಂದೆ ತೋರ್ಸ್‌ದೆ ನೆಗಾಡಿಕಂಡೇ ಕೇಳ್‌ತ್.

"ಇನ್ನೀಗ ನನ್ನ ಕೊಲ್ಲಿಕೆ ನೀನ್ ಬಂದಿರೊಕು ಅಲಾ?

"ಹೌದ್, ಮತ್ತೇಕೆ ಬಂದದ್‌ಂತ ಗೇನ ಮಾಡ್‌ದ್, ನಿಂಗೆ ಗೊತ್ತಾಗಿ ಹೋತ್ ಅಲಾ ತಲೆ ಇರವು ಎಲ್ಲ ನಿನ್ನಂಗೇ ಮಾರಾಯ ತನ್ನ ತಲೆ ಹೋದನ್ನ ಮೊದ್ಲೇ ತಿಳ್‌ಕಂಡವೆ"

ಈ ಬೋರ್ ಗುಡ್ಡೆಲಿ ನನ್ನ ತಲೆ ತೆಗೆಯವು ಇನ್ನು ಹುಟ್ಟಿತ್‌ಲೆ ಆತಾ.

ದೇವಯ್ಯ ಮೆಲ್ಲೆ ಬಗ್ಗಿ ಹಾಸಿಗೇನ ಅಡಿಯಿಂದ ರಿವಾಲ್ವರ್ ತೆಗಿಯಕೆ ಪೇಚಾಡ್‌ದುನ ಕಂಡ್ ಚಂಗುಮಣಿ ಹೇಳ್‌ತ್.

"ರಿವಾಲ್ವರ್ ಬೇಕಾ ನಿಂಗೆ ಹಂಗಿದ್ರೆ ನೀನ್ ಕಷ್ಟ ಪಡುದೇನೂ ಬೇಡ ನಾನ್ ತೆಗೆದ್ ಕೊಟ್ಟನೇ".

ಅಷ್ಟ್ ಹೇಳಿ ಚಂಗುಮಣಿ ಸಿಡ್ಲ್‌ನಂಗೆ ಹಾರಿ ರಿವಾಲ್ವರ್‌ನ ಕೈಗೆ ತಕಂಡತ್. ಬುಲ್ಲೆಟ್ ಖಾಲಿ ಮಾಡಿ ಬುಟ್ಟ್ ದೇವಯ್ಯನ ಕೈಗೆ ಕೊಟ್ಟಿತ್.

ದೇವಯ್ಯ ಟೆಲಿಪೋನ್ ಹತ್ರ ಹೋತ್ "ಹಲೋ ಪೊಲೀಸ್ ಸ್ಟೇಷನ್ನಾ?"

ಪೋನ್‌ಲಿ ಮಾತಾಡಕಾಕನ ಅಂವ ಆಗಾಗ ಚಂಗುಮಣಿನ ನೋಡ್‌ತ್ತಿತ್ತ್. ಚಂಗುಮಣಿ ಮಾತ್ರ ತನಿಗೆ ಏನೂ ಆಗದಂಗೆ ನೆಗಾಡಿ ಕಂಡೇ ನಿಂತಿತ್ತ್.

"ಸರ್ಕಲ್ ಇನ್ಸ್‌ಪೆಕ್ಟರೆ, ನೋಡಿ ನಿಮ್ಮ ಲಾಕಪ್‌ಂದ ತಪ್ಪಿಕಂಡ ಚಂಗುಮಣಿ ಇಲ್ಲಿ ಬಂದುಟ್ಟು ನನ್ನ ಮನೆ ಬೆಡ್‌ರೂಂಲಿ ಉಟ್ಟು ಅಂವ ನನ್ನ ಕೊಲ್ಲಿಕೆ ಬಂದದ್ ಗಡ. ಆತ್ ಬೇಗ ಬನ್ನಿ ಇನ್ಸ್‌ಪೆಕ್ಟ್ರೆ".

ದೇವಯ್ಯ ರಿಸೀವರ್ ಮಾಡ್ಗಿತ್ ಚಂಗುಮಣಿ ಆಗಳೂ ನೆಗಾಡ್ತ್ "ಮುಗಿತಾ ಸಾವುಕಾರ? ಭೋರ್ ಗುಡ್ಡೆ ಹುಲಿಯಲ್ಲ ನೀನ್? ಚಂಗುಮಣಿ ಮೆಲ್ಲೆ ದೇವಯ್ಯನ ಹತ್ರ ಹೋತ್ "ನನ್ನ ಹತ್ರ ಬರ್ಬೇಡ, ಕೊಂದ್ ಬುಟ್ಟನೇ"ದೇವಯ್ಯ ಜೋರಾಗಿ ಕಿರ್‌ಚಿತ್ ಚಂಗುಮಣಿ ನೆಗಾಡಿ ಕಂಡೇ ಅವನ ಹತ್ರ ಹೋತ್ "ಚಂಗುಮಣಿ, ವಾಪಾಸ್ ಹೋದು ನಿಂಗೆ ಒಳ್ಳದೇ ಹಿಂಗಾದರೆ ನಿಂಗೆ ಬಚಾವಾಕೆ ಸಂದರ್ಭ ಉಟ್ಟು". "ನಿನ್ನ ಮುಗ್ಸದೆ ನಾನ್ ಹೋದು ಉಟ್ಟಾ ಹೇಳ್". ದೇವಯ್ಯ ಒಂದೊಂದೇ ಹೆಜ್ಜೆ ಹಿಂದಕ್ಕೆ ಮೊಡ್ಗಿಕಂಡ್ ಇತ್ತ್.

ತನ್ನ ಕೈಲಿದ್ದ ಚಾಕ್‌ನ ತೆಗೆದ್ ಚಂಗು ಮಣಿ ದೇವಯ್ಯನ ಡೊಳ್ಳು ಹೊಟ್ಟೆಗೆ ಕುತ್ತಿ ಸ್ವಲ್ಪ ಗಾಯ ಮಾಡ್ತ್. ರಕ್ತ ಹರ್ತ್ ದೇವಯ್ಯ ಹೊಟ್ಟೆಗೆ ಆದ ಗಾಯಕೆ ಒಂದೇ ಕೈ ಹಿಡ್‌ಕಂಡ್ ಮತ್ತೊಂದು ಕೈಲಿ ಬೇಡಾಂತ ಹೇಳ್‌ವ ಅರ್ಥಲ್ಲಿ ಚಂಗುಮಣಿಗೆ ಸನ್ನೆ ಮಾಡಿ ತೋರಿಸಿತ್. "ನನ್ನ ಕೊಲ್ಬೇಡ ಚಂಗುಮಣಿ"

"ಕೊಲ್ಲದೆ ಇರಿಕೆ ಆದ್‌ಲೆಲ್ಲಾ ಸಾಹುಕಾರ ನಾನ್ ಆಣೆ ಹಾಕಿಯೊಳೆಲ್ಲ".

ನಿಂಗೆ ನಾನ್ ಮಾಡ್‌ದ ಉಪಕಾರ ಮರ್‌ತ್ ಬುಟ್ಟಾ ಚಂಗುಮಣಿ?"

"ಏನ್ ಹೇಳ್‌ದೆ ನೀನ್? ನಂಗೆ ಮಾಡ್‌ದ ಉಪಕಾರ ಈ ಬೋರ್ ಗುಡ್ಡೆಲಿ ಒಬ್ಬ ಒಳ್ಳ ಹೈದಾಗಿ ಬೆಳ್‌ದ್ ನನ್ನನ್ನ ಸಣ್ಣದಿರ್‌ಕನೆ ಕೊಲೆಗಾರನಾಗಿ ಮಾಡ್‌ದ್. ಪೆನ್ನ್ ಹಿಡ್‌ದ್ ಬರಿಯಾಕಾದ ಈ ಕೈಲಿ ಚಾಕ್‌ನ ಹಿಡಿಯುವಂಗೆ ಮಾಡ್ದ್ ನೀನ್ ನಾಯಿ ಸೂ.... ಮಂಜ, ನಿಂಗಾಗಿ ನಿನ್ನ ಸ್ವಾರ್ಥಕ್ಕಾಗಿ ನಾನ್ ಕೊಲೆಗಾರನಾದೆ ಅಲ್ಲಾ? ನಿಂಗಾಗಿ ಜೈಲಿಗೂ ಹೋದೆ. ಎಲ್ಲಾ ಕಡೆ ನಿನ್ನಿಂದ ನಂಗೆ ಮೋಸ ಅಲ್ಲದೆ ಉಪಕಾರ ಒಂದು ಆತ್‌ಲೆ. ಕಡೆಗೆ ನನ್ನ ಪ್ರೀತಿಯ ತಂಗೆನ ಕೊಂದ್ ಬುಟ್ಟ ಇದೆಲ್ಲ ನೀನ್ ನಂಗೆ ಮಾಡ್‌ದ ಉಪಕಾರ: ಚಂಗುಮಣಿ ತನ್ನ ಕೈಲಿದ್ದ ಚಾಕ್‌ಲಿ ದೇವಯ್ಯನ ಕೈಗೆ ಉದ್ದಕೆ ಗೀರ್‌ತ್ ಕೈಯಿಂದ ರಕ್ತ ಹರ್ತ್. "ನಾನ್ ನಿಂಗೆ ಎಂತ ಬೇಕಿದ್ರು ಕೊಟ್ಟನೆ ಚಂಗುಮಣಿ, ನಾನ್ ಎಷ್ಟೆಲ್ಲಾ ಕಷ್ಟಪಟ್ಟ್ ಇಷ್ಟೆಲ್ಲ ಸೊತ್ತ್ ಮಾಡ್‌ದೆ. ಆದರೆ ಸುಖಲಿ ಕುದ್ದ್....

"ಸುಖಲಿ ಕುದ್ದ್ ನೀನೇ ಕಾಲ ಕಳಿಯೋದೆನೂ ಬೇಡ, ನಿನ್ನ ಮಂಜ ಉಟ್ಟಲ್ಲ ಜೀವನ್ ಅಂವ ಸೊಲ್ಪ ಒಳ್ಳೆತನ, ಸತ್ಯ, ಧರ್ಮ ಇರೋ ವ್ಯಕ್ತಿ. ಅಂವ ಈ ಸೊತ್ತ್‌ನ್ನೆಲ್ಲ ಅನುಭವಿಸಲಿ."

"ಇದೊಂದು ಸಲ ನನ್ನ ಕ್ಷಮಿಸಿ ಬುಡು ಚಂಗುಮಣಿ", "ಹೌದ್ ಸಾಹುಕಾರ ನಾನ್ ನಿಂಗೆ ಕ್ಷಮೆ ಕೊಡ್ತಾ ಒಳೆ. ನಿನ್ನ ಮೂರು ಸಾರಿ ಸಾಯ್ಸಿಕೆ ತೀರ್ಮಾನ ಮಾಡ್‌ದ್ದೆ. ನೀನ್ ಹಿಂಗೆ ಬೇಡಿದ ಕಾರಣ ಒಂದೇ ಸಾರಿ ಸಾಯ್ಸಿದ್ರೆ ಸಾಕೇಂತ ಹೇಳೋ ತೀರ್ಮಾನಕೆ ಬಂದೊಳೆ."

ಚಂಗುಮಣಿ ಹರ್ತ ಚಾಕ್‌ನ ತುದಿಂದ ಬೋರ್‌ಗುಡ್ಡೆ ದೇವಯ್ಯನ ದೊಂಡೆಗೆ ನೆಟ್ಟಂಗೆ ಕುತ್ತಿತ್. ಕಾಲ್ ಹಿಡ್‌ದ್ ಬೇಡಿದ್ರೂ ಯಾವ ಪ್ರಯೋಜನ ಸಿಕ್ಕುಲೆತ ಗೊತ್ತಾಕ್‌ನ ದೇವಯ್ಯ ಜೋರಾಗಿ ಮೊರ್‌ಡಕೆ ಸುರ್ ಮಾಡ್‌ತ್ ಅವನ ಮರ್ದುವ ಮುಖ ಕಂಡ್ ಚಂಗುಮಣಿ ನೆಗಾಡ್‌ತ್.

"ಓ ಹೊ ನಿಂಗೆ ಮೊರ್‌ಡಿಕೂ ಗೊತ್ತುಟ್ಟು ಅಲ್ಲ ಸಾಹುಕಾರ. ನಿಂಗೂ ಬ್ಯಾನಾದೆ ಅಲ್ಲ. ನಿನ್ನ ಮೊರ್ಡಟ ಕಾಂಬಕನ ನಂಗೆ ನಾಚಿಕೆ ಆಗ್ತಾ ಉಟ್ಟು ಸಾಹುಕಾರ. ಇನ್ನೊಮ್ಮೆ ಮೊರ್‌ಡ್ ನೋಡ್ನೊ.

ದೇವಯ್ಯನ ಮತ್ತೊಂದು ಕೈಗೂ ಚಂಗುಮಣಿನ ಚಾಕ್ ಹುಕ್ಕಿತ್. ಯಾರೊ ಓಡಿ ಬರುವ ಸದ್ದ್ ಕೇಳ್ತ್ ಪೋಲೀಸ್ ಬಂದೋ, "ಬಾಗಿಲ್ ತೆಗಿಯೋ, ಲೋ ಚಂಗುಮಣಿ" ಪೋಲೀಸ್ ಬಾಗಿಲ್ ಬಡಿದವೆ. ಚಂಗು ಮಣಿ ದೇವಯ್ಯನ ಮುಸುಡಿ ನೋಡ್‌ತ್. ಅವನ ಮುಸುಡಿಲಿ ತಾನ್ ಬದುಕಿ ಬುಟ್ನೇಂತ ಹೇಳುವ ಒಂದು ಕಳೆ ಕಾಣಿಸ್‌ತ್.

ಅಂವ ಚಾಕನ ದೇವಯ್ಯನ ಹೊಟ್ಟೆಗೆ ಕುತ್ತಿತ್ತ್. ಗುಳುಗುಳು ಸದ್ದ್ ಮಾಡಿಕಂಡ್ ಅವನ ಹೊಟ್ಟೆಂದ ರಕ್ತ ಹೊರಗೆ ಬಾತ್. ಮತ್ತೆ ಚಾಕ್‌ನ ಎಳ್‌ದ್ ಅವನ ಎದೆಗೂ ಚುಚ್ಚಿತ್, ಪೋಲೀಸ್ ಹತ್ರ ನುಗ್ಗಿ ಬಾಕೆ ಮುಂದೆ ಈ ಬೊಡ್ಡಿ ಮಂಜನ ಉಸ್‌ರ್ ನಿಲ್ಲುಕು. ಆಸ್ಪತ್ರೆಗೆ ಹೋಗಿ ಬಚಾವಾಕೆ ಬೊತ್ತ್. ದೇವಯ್ಯನ ಉಸ್‌ರ್ ನಿತ್ತ್ ಹೋತ್.

* * *

ಇಡೀ ಬೋರ್ ಗುಡ್ಡೆ ಶಾಂತಿ ಆತ್.

ದೇವಯ್ಯನ ಬಂಗ್ಲೆಲೂ ಇಂದ್ ಯಾವ ಗಲಾಟೆ ಕೂಡ ಇಲ್ಲೆ. ರಂಜನ್‌ದ್ ಕೂಸ್‌ನ ಗೌರ ಹೆತ್ತತ್. ಅದ್ ಗಂಡ್ ಕೂಸ್, ನಾಡ್‌ಕೊಲ್ಲಿ ಮಾದಪ್ಪನೂ ಪ್ಯಾಕ್ಟ್ ಮಾದಯ್ಯನು ಕೂಸ್‌ನ ನೋಡಿಕೆ ಹೋದು ಮುತ್ತಕ್ಕಿ, ಜೀವನ್, ಮೀರ ಆಳ್‌ಕುಟ್ಟಿ ಎಲ್ಲಾವು ಮಡಿಕೇರಿ ಸಿವಿಲ್

20ನೇ ಪುಟಕ್ಕೆ

## ಗುಲಾಬಿ

ಅಂದದ ಚೆಂದದ ಕೆಂಪು ಗುಲಾಬಿ
ಮಕರಂದದ ಸುವಾಸನೆಯ ಮಂದಾರ
ಗಿಡಕ್ಕೆ ನೀರನ್ನು ಉಣಿಸಿ ಬೆಳೆಸಿದರು
ಹರುಷದಲಿ ಚಿಗುರಿತು ತನ್ನ ತಾನೇ ಮರೆತು

ಮುಳ್ಳಿನ ಗಿಡ ಬಿಟ್ಟಿತು ಸುಂದರ ಮೊಗ್ಗು
ಸೂರ್ಯನ ಕಿರಣದ ನೋಡುತ್ತಿತ್ತು ಇಣುಕಿ
ಅರಳಿದ ಹೂವನ್ನು ನೋಡುವರು ಈಗ ಜನ ಇಣುಕಿ
ಮಂಜು ಹನಿಯನ್ನು ಇರಿಸಿತ್ತು ತನ್ನಲ್ಲಿ
ತನ್ನ ಸೌಂದರ್ಯವನ್ನು ಹಂಚಿತು ಪರರಲ್ಲಿ

ಗುಲಾಬಿ ಹೂಗಳ ರಾಶಿ ಮಾರ್ಕೆಟಿನಲ್ಲಿ
ಅದರ ಅಂದದ ಪರಿ ಎಲ್ಲರ ಕಣ್ಣೋಟದಲ್ಲಿ
ಇದಕೆಷ್ಟು ಇದಕೆಷ್ಟು ಎಂಬ ಆತುರದಲ್ಲಿ
ಕೊಂಡು ತಂದರು ತಮ್ಮ ಪ್ಯಾಕೆಟ್‌ನಲ್ಲಿ

ಗುಲಾಬಿ ಆಗುವುದು ಕಾಣಿಕೆ
ಇನ್ನೆದೆಯೆ? ಇದಕ್ಕೆ ಎಣಿಕೆ !
ಅಂದಿತ್ತು ಪ್ರೀತಿಯ ಸಂಕೇತ
ನೋಡುಗರ ಒಲವಿನ ನೋಟಕ್ಕೆ

ಅಂದಿತ್ತು ಜೀವ ತುಂಬಿದ ಕಳೆ
ಇಂದು ಇದೆಯೆ? ಯೌವನದ ಹೊಳೆ
ನಿನ್ನಲ್ಲಿರುವುದೆ? ಆ ಮಂಜು ಹನಿ
ಒಣಗಿದ ಕಪ್ಪು ಕನಿ

ಬಾಡಿದ ಹೂವಿನ ರೂಪಕ್ಕೆ
ಕಲೆಯಿಲ್ಲದ ಸೊಂಪಿನ ತಾಪಕ್ಕೆ
ನೋವಾಗಿದೆ ಇಂದು ನನ್ನ ಹೃದಯಕ್ಕೆ
ನಿನ್ನ ಬೆಲೆ ಇಂದು ಶೂನ್ಯ ಬರೀ ಶೂನ್ಯ.......

ನೆನಪಿಲ್ಲ 'ಗುಲಾಬಿ' ನಿನ್ನ ಈ ಜನಕ್ಕೆ
ಮರುಗುವೆ ಈ ನಿನ್ನ ಸಂಕಟಕ್ಕೆ
ಮರೆಯದಿರು ನಿನಗೆ ಕೊಡುವ ಕಾಟಕ್ಕೆ
ಇಷ್ಟೆಲ್ಲಾ ಬರೆದ ನನ್ನ ತೊಳಲಾಟಕ್ಕೆ

ಎಡಿಕೇರಿ ಗೀತಾ ಚಂಗಪ್ಪ
ಪಾಲೂರು ಗ್ರಾಮ ಮತ್ತು ಅಂಚೆ

---

19ನೇ ಪುಟದಿಂದ

ಅಂತಾದ್ದು ಏನೂ ಇಲ್ಲ !

ರೇವತಿಯ ಗಮನಕ್ಕೆ ಬಂದಿತು !

ಹೆಣದ ಮುಖದಲ್ಲಿ ಭಯದ ಛಾಯೆ !

ಅಲ್ಲಿ... ಹಾವುಗಳು ಸುತ್ತಿಕೊಂಡಿದ್ದಾಗ ವಾತಾವರಣದಲ್ಲಿ ಒಂದು ರೀತಿಯ ಬದಲಾವಣೆ ಉಂಟಾಗಿತ್ತು !

ಅದು ರೇವತಿಗೂ ಗೊತ್ತಾಗಿರಲಿಲ್ಲ !

ಪ್ರಸನ್ನ ಈಗ ಕೆಲಸದ ಆಳುಗಳ ಸಹಾಯದಿಂದ ಹೆಣವನ್ನು ತೆಗೆಸಿ ಕೊಂಡು ಹೋದನು.

ರೇವತಿಗೆ ಧೃಡವಾಯಿತು !

ಮಂಜಯ್ಯನ ದೇಹದ ತುಂಬಾ ಹಾವುಗಳು ಸುತ್ತಿಕೊಂಡಿದೆ. ಆದರೆ ಹಾವು ಕಚ್ಚಿಲ್ಲ !

ಇದು... ಇದು.. ಹೇಗೆ ಸಾಧ್ಯ?

ಊರಿನ ಜನಗಳೆಲ್ಲಾ ಅಲ್ಲಿರುವಾಗ ಹಾವುಗಳು ಬರೀ ಮಂಜಯ್ಯನ ದೇಹಕ್ಕೆ ಯಾಕೆ ಸುತ್ತಿಕೊಂಡಿತು?

ಅಷ್ಟೊಂದು ಹಾವುಗಳಲ್ಲಿ ಒಂದೇ ಒಂದು ಹಾವು ಸಹ ಮಂಜಯ್ಯನನ್ನು ಕಚ್ಚಿಲ್ಲ !

ಅದೇ....ಅದೇ ಯಾಕೆ !

ರೇವತಿ ನಿರ್ಧರಿಸಿದಳು ಇದರ ಹಿಂದೆ ಏನೋ ನಿಗೂಢತೆ ಇದೆ. ಅದನ್ನು ಪತ್ತೆ ಮಾಡಲೇಬೇಕು !

(ಮುಂದುವರೆಯುತ್ತದೆ)

---

## ಕವನ

ಓ ಕೆಚ್ಚೆದೆಯ ವೀರ ಭರತ ಭೂಮಿಯ ಚೋರ
ಪಾರೆಗಳ ಅಹವಾಲು ನಿನಗಿದೋ ಸವಾಲು
ಕರೆದಿಹಳು ಕೈ ಬೀಸಿ ಆ ತಾಯಿ ಕಾಶ್ಮೀರಿ
ಬಂದು ನೀಡಲೇ ವೀರ ಬಿಸಿ ಬಿಸಿಯ ನೆತ್ತರ ||ಪ||

ಸರ್ವಾಂಗ ಸುಂದರನೇ, ಮಾಂಗಲ್ಯ ಶೋಭಿತೇ
ನಿನ್ನ ಮಾತೆಯ ಮಾನ ಉಳಿಸಲೇ ಧೀರನೇ
ಈ ಭುವಿಯ ಕಾಯ್ದಿಹನು ಮುಕ್ಕಣ್ಣ ಈಶ್ವರ
ಅವನಿಹದ ಈ ನೆಲವು ನಮಗೆಲ್ಲಾ ನಶ್ವರ ||ಪ||

ನಿನ್ನ ಪರಿವಾರದಾ ಆಸೆಯನು ತೊರೆದು
ಸಣ್ಣ ಕಂದಮ್ಮನ ಕೇಕೆಯನು ನೆನೆದು
ಕನ್ನಡಮ್ಮನ ಹೆಸರ ಮತ್ತೊಮ್ಮೆ ಕರೆದು
ಮುಂದೆ ಹೋಗಲೇ ವೀರ ಕೊಡಗಿನಾಧೀರ ||ಪ||

**ತೀರ್ಥ ಪ್ರಕಾಶ್ ಎ. ಆರ್.(ಚೆಂಬು - ದಬಡ್ಕ)ಕಾಶ್ಮೀರ**

---

19ನೇ ಪುಟದಿಂದ

ಆಸ್ಪತ್ರೆಲಿ ಇದ್ದೊ. ಕೂಸ್‌ನ ನೊಡ್‌ದ ಮೇಲೆ ಜೀವನ್ ಮತ್ತೆ ಮೀರಾ ಆಸ್ಪತ್ರೆನ ಹತ್ರ ಇರ್‍ವ ರಾಜಸೀಟ್ ಕಡೆಗೆ ನಡ್‌ದೇ ಹೋದೊ ಅಲ್ಲಿಗೆ ಹೋಕನ ಕೈ ಕೈ ಹಿಡ್‌ದ್ ನಿಧಾನ ಆಗಿ ಮೈ ಮೈ ತಾಗಿಸಿ ಕಂಡ್ ಇಬ್ಬರೂ ಜೋರಾಗಿ ನೆಗಾಡಿ ಕಂಡ್ ವಾಲಾಡಿ ಕಂಡ್ ತಿಮಯ್ಯ ಸರ್ಕಲ್ ಹತ್ರ ಹೋದೂ ಅವರನ್ನ ನೋಡಿ ಮುತ್ತಕ್ಕಿಯೂ ನಾಡ್‌ಕೊಲ್ಲಿ ಮಾದಪ್ಪನೂ ಮುಖ ಮುಖ ನೋಡ್‌ಕಂಡೊ. ಕಣ್ಣ್‌ನ ಪೂಜಿಕಂಡ್ ಮುತ್ತಕ್ಕಿ ಹೇಳ್‌ತ್, "ಗೌರಂಗೆ ಆ ಭಾಗ್ಯ ಸಿಕ್ಕಿತ್‌ಲೆ. ಇವು ಆದ್ರೂ ಪ್ರೀತಿಲಿ ಲಾಯ್ಕಾಗಿ ಬಾಳಲಿ. ಅಲ್ಲ ಮಾದಪ್ಪಣ್ಣ?" ಮಾದಪ್ಪಣ್ಣನ ಕಂಣ್‌ಲಿ ಸಹ ನೀರ್ ಬೀತ್.

(ಮುಕ್ತ್)

## ಶುಭಾಶಯಗಳು



ಶ್ರೀಮತಿ ಶ್ರೀ ಚೊಂಡೀರ (ತಿರೋಡಿ) ಅಪ್ಪಯ್ಯನವರು
ನಿವೃತ್ತ ಕೃಷಿ ಸಹಾಯಕ ವಿಸ್ತರಣಾ ಅಧಿಕಾರಿ

ಶ್ರೀಮಾನ್ ಅಪ್ಪಯ್ಯನವು 75 ಮಾವು ಬೇವುಗಳನ್ನು ಸವಿದು ಅಪಾರ ಅನುಭವ ಸವಿನೆನಪುಗಳೊಂದಿಗೆ 10-7-1999ರಂದು ತಮ್ಮ 76ನೇ ವಯಸ್ಸಿಗೆ ಕಾಲಿರಿಸೊಳೋ. ಶ್ರೀಯುತರಿಗೆ ಭಗವಂತನು ಆರೋಗ್ಯ, ಐಶ್ವರ್ಯ, ದೀರ್ಘಾಯುಶ್ಯ, ಸುಖ ಸಂತೋಷಗಳನ್ನು ಕರುಣಿಸಲಿ ಎಂದು ಹಾರೈಸುವೆವು.

ಮಂಙಂದಿರು : ಸುರೇಶ, ಪ್ರಕಾಶ್
ಸೊಸೆಕ : ಶೋಭ, ರಾಣಿ
ಮಗಕ್ಕ : ಪೊರೆಯನ ಜ್ಯೋತಿ ಪ್ರಕಾಶ್, ಬೆಂಗಳೂರು
ಪಾಂಡನ ಯಶೋಧಗಣೇಶ್, ಮರಗೋಡು
ಪಿಳ್ಳಿಕ : ಡೆಮ್ಮಿ, ಜುಪ್ಪಿ, ವಿಕ್ಕಿ ಅಪ್ಪಯ್ಯ, ಶಿಲ್ಪಶ್ರೀ, ತೀರ್ಥ, ಶ್ವೇತ, ಅಕ್ಷತಾ, ಪ್ರೀತಿಕ, ಕೃತಿಕ

ಮೇಕೇರಿ ಗ್ರಾಮ,
**ದೂರವಾಣಿ : 08272 - 25480, 29970**

---

## ವಾರ್ಷಿಕ ಪುಣ್ಯ ಸ್ಮರಣೆ



ದಿ. ಕೊಡಪಾಲು ಸುಬ್ರಾಯ, ದಿ. ಕೊಡಪಾಲು ಬೆಳ್ಯಪ್ಪ
ಮರಣ :14-10-1998 ಮರಣ : 2-6-1998

ನೀವುಗಳು ನಮ್ಮನ್ನಗಲಿ ವರ್ಷ ಕಳೆದರೂ, ನಿಮ್ಮ ಸವಿನೆನಪು ಹಿತ ನುಡಿಗಳು, ಸದಾ ನಮ್ಮಲ್ಲಿ ಪ್ರತಿಬಿಂಬಿಸುತ್ತಿರುತ್ತದೆ. ನಿಮ್ಮಗಲಿಕೆಯ ನೋವು ನಮಗೆ ಮರೆಯಲು ಅಸಾಧ್ಯ. ನಿಮಗಳ ದಿವ್ಯಾತ್ಮಕ್ಕೆ ಆ ಪರಮಾತ್ಮನು ಚಿರಶಾಂತಿಯನ್ನು ಕರುಣಿಸಲಿ ಎಂದು ಪ್ರಾರ್ಥಿಸುವ

**ಮಕ್ಕಳು, ಸೊಸೆಯಂದಿರು, ಅಳಿಯಂದಿರು, ಮತ್ತು ಮೊಮ್ಮಕ್ಕಳು, ಕಾರುಗುಂದ ಗ್ರಾಮ, ಮಡಿಕೇರಿ ತಾಲೋಕು.**

---

## ದ್ವಿತೀಯ ವರ್ಷದ ಚಿರಸ್ಮರಣೆ



ಜೈನೀರ ಚಂದ್ರಪ್ಪ ಹಾಸನ

ನೀವು ನಮ್ಮನ್ನು ಅಗಲಿ ಇಂದಿಗೆ ಎರಡು ವರ್ಷ ಸಂದರೂ ನಮ್ಮ ರಿಕ್ಷಾ, ನಿಮ್ಮ ಖಾಕಿ ಬಟ್ಟೆ ಇನ್ನು ನಮಗೆ ಹಚ್ಚ ಹಸುರಾಗಿ ಇದೆ. ನೀವು ತೋರಿಸಿದ ಮಾರ್ಗ ನಮಗೆ ಮಾರ್ಗದರ್ಶನವಾಗಿದೆ. ನಿಮ್ಮ ಆತ್ಮಕ್ಕೆ ಸದಾ ಚಿರಶಾಂತಿ ಇರಲಿ.

**ಪತ್ನಿ : ಪಾರ್ವತಿ ಹಾಗೂ ಮಗ, ಸೊಸೆ, ಮೊಮ್ಮಗಳು, ಮಗ ಲೋಕೇಶ್, ಮಗಳು ಅಳಿಯ ಹಾಗೂ ಮೊಮ್ಮಕ್ಕಳು.**
**ಉದಯಗಿರಿ, ಹಾಸನ. ✆ : 61091**

ಜನನ : 30-3-1944 ಮರಣ : 25-10-1997

K. R. N. N. - 240 10-01-96 TCI Kar. 09592

# ಗೌಡ ಸಮಾಜ (ರಿ.) ಮರಗೋಡು

## ನೂತನ ನಿರ್ಮಿತ ಕಲ್ಯಾಣ ಮಂಟಪದ ಉದ್ಘಾಟನೆ ಮತ್ತು ಮೂರನೇ ವರ್ಷದ ಕೈಲ್ ಮುಹೂರ್ತಸಮಾರಂಭದ

## ಆಹ್ವಾನ ಪತ್ರಿಕೆ

*ದಿನಾಂಕ 31-10-1999 ಭಾನುವಾರ*

*ಸಮಯ : ಬೆಳಿಗ್ಗೆ 9-30ಕ್ಕೆ*

ಉದ್ಘಾಟನೆ :

ಶ್ರೀ ಕುರುಂಜಿ ವೆಂಕಟರಮಣ ಗೌಡರು,

ಸ್ಥಾಪಕರು, ಕೆ. ವಿ. ಜಿ. ವಿದ್ಯಾಸಂಸ್ಥೆ, ಸುಳ್ಯ.

ಅಧ್ಯಕ್ಷತೆ :

ಶ್ರೀ ಬೈಮನ ಆರ್. ಪೊನ್ನಪ್ಪ,

ಅಧ್ಯಕ್ಷರು, ಗೌಡ ಸಮಾಜ, ಮರಗೋಡು

ಮುಖ್ಯ ಅತಿಥಿ :

ಶ್ರೀ ಊರುಬೈಲು ಪಿ. ಜಯಪ್ರಕಾಶ್

ಅಧ್ಯಕ್ಷರು, ಜಿಲ್ಲಾ ಪಂಚಾಯತ್, ಕೊಡಗು

ಅತಿಥಿಗಳು :

ಅಧ್ಯಕ್ಷರು, ಕೊಡಗು ಗೌಡ ವಿದ್ಯಾ ಸಂಘ, ಮಡಿಕೇರಿ.

ಕೊಡಗಿನ ಎಲ್ಲಾ ಗೌಡ ಸಮಾಜಗಳ ಅಧ್ಯಕ್ಷರುಗಳು.

ಅಧ್ಯಕ್ಷರು, ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿ, ಮಡಿಕೇರಿ

ಅಧ್ಯಕ್ಷರು, ಕೊಡಗು ಗೌಡ ಮಹಿಳಾ ಒಕ್ಕೂಟ, ಮಡಿಕೇರಿ

ಕೊಡಗಿನ ಸರ್ವ ಬಾಂಧವರು ಇದನ್ನೆ ಆಮಂತ್ರಣ ಪತ್ರವೆಂದು ಭಾವಿಸಿ ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿ ಈ ಕಾರ್ಯಕ್ರಮವನ್ನು ಯಶಸ್ವಿಗೊಳಿಸಬೇಕಾಗಿ ವಿನಂತಿ.

ಅಧ್ಯಕ್ಷರು ಮತ್ತು ಆಡಳಿತ ಮಂಡಳಿ
ಮರಗೋಡು

**Kodagu Sangathi** Kannada Fortnightly Edited, Published, Printed & Owned by Pattada P. Sheelamani, No. 35, Savitha Nilaya, I Cross, 4th Block, **Jayalaxmipuram, Mysore - 12.** And **SANGATHI** Office ✆ **: 0821/516771.** And Printed at Sri Guru Raghavendra Printers, 489, Devamba Agrahara, K. R. Mohalla, Mysore - 24. ✆ : 0821/431792.